# ಶಿಕ್ಷಣ ಆಯೋಗದ ಮಾಹಿತಿಗಾಗಿ ಒಂದು ಹೇಳಿಕೆ

## ಜ್ಯೋತಿರಾವ್‌ಗೋವಿಂದರಾವ್ ಫುಲೆ

ಶೈಕ್ಷಣಿಕ ವಿಷಯಗಳ ಬಗ್ಗೆ ನನ್ನ ಅನುಭವ ಪ್ರಧಾನವಾಗಿ ಪೂನಾ ಮತ್ತು ಅದರ ಸುತ್ತಮುತ್ತಲಿನ ಹಳ್ಳಿಗಳಿಗೆ ಸೀಮಿತವಾಗಿದೆ. 25 ವರ್ಷಗಳ ಹಿಂದೆ ಮಿಷನರಿಗಳು ಪೂನಾದಲ್ಲಿ ಹೆಣ್ಣುಮಕ್ಕಳ ಶಾಲೆಯೊಂದನ್ನು ಸ್ಥಾಪಿಸಿದ್ದರು. ಆದರೆ ಆ ಸಮಯದಲ್ಲಿ ಯಾವುದೇ ಸ್ಥಳೀಯ ಹೆಣ್ಣುಮಕ್ಕಳ ಶಾಲೆ ಅಸ್ತಿತ್ವದಲ್ಲಿರಲಿಲ್ಲ. ಆದ್ದರಿಂದ ಸರಿಸುಮಾರು 1851ರಲ್ಲಿ ಅಂತಹ ಒಂದು ಶಾಲೆಯನ್ನು ಸ್ಥಾಪಿಸಲು ನನ್ನನ್ನು ಪ್ರೇರೇಪಿಸಲಾಯಿತು. ನಾನು ನನ್ನ ಪತ್ನಿ ಆ ಶಾಲೆಯಲ್ಲಿ ಸುಮಾರು ವರ್ಷಗಳ ಕಾಲ ಒಟ್ಟಿಗೆ ಕಾರ್ಯನಿರ್ವಹಿಸುತ್ತಿದ್ದೆವು. ಅದಾದ ಕೆಲವು ಸಮಯದ ಅನಂತರ ನಾನು ಆ ಶಾಲೆಯನ್ನು ಸ್ಥಳೀಯ ಸುಶಿಕ್ಷಿತ ಜನರ ವ್ಯವಸ್ಥಾಪಕ ಮಂಡಳಿಗೆ ಒಪ್ಪಿಸಿದೆ. ಅವರ ಆಶ್ರಯದಲ್ಲಿ ನಗರದ ವಿವಿಧ ಭಾಗಗಳಲ್ಲಿ ಇನ್ನೆರಡು ಶಾಲೆಗಳು ಪ್ರಾರಂಭವಾದವು. ನಾನು ಸಹ ಬಾಲಕ ಬಾಲಕಿಯರಿಬ್ಬರು ಇರುವ ಸ್ಥಳೀಯ ಮಿಶ್ರಿತ ಶಾಲೆಗಳನ್ನು ಕೆಳವರ್ಗದವರಿಗಾಗಿ ಸ್ಥಾಪಿಸಿದೆ. ಇದನ್ನು ವಿಶಿಷ್ಟವಾಗಿ ಮಹಾರ್ ಮತ್ತು ಮಾಂಗ್ ಜನರಿಗಾಗಿ ಸ್ಥಾಪಿಸಲಾಯಿತು. ಹೆಣ್ಣುಮಕ್ಕಳ ಶಾಲೆಗಳನ್ನು ಪ್ರಾರಂಭಿಸಿದ ಒಂದು ವರ್ಷದ ಅನಂತರ ಇದನ್ನು ಸ್ಥಾಪಿಸಲಾಯಿತು. ಮೇಲೆ ಹೇಳಿದ ವರ್ಗಗಳಿಗಾಗಿ ಇನ್ನೆರಡು ಶಾಲೆಗಳನ್ನು ಅನಂತರದಲ್ಲಿ ಸೇರಿಸಲಾಯಿತು. ಸರ್ ಎರ್‌ಸ್ಕಿನ್ ಪರ್ರಿ ಅಂದಿನ ಶಿಕ್ಷಣ ಮಂಡಳಿಯ ಅಧ್ಯಕ್ಷರಾಗಿದ್ದರು ಮತ್ತು ಲಮ್ಸ್ ಡೈನ್ ಅಂದಿನ ಸರ್ಕಾರದಲ್ಲಿ ಶಿಕ್ಷಣ ಇಲಾಖೆಯ ಕಾರ್ಯದರ್ಶಿಯಾಗಿದ್ದರು. ಅವರು ಈ ಹೆಣ್ಣು ಮಕ್ಕಳ ಶಾಲೆಗಳಿಗೆ ಭೇಟಿ ನೀಡಿ, ಈ ಬೆಳವಣಿಗೆಯನ್ನು ಕಂಡು ಅತ್ಯಂತ ಸಂತೋಷಗೊಂಡು ನನಗೆ ಒಂದು ಜೊತೆ ಶಾಲುಗಳನ್ನು ಉಡುಗೊರೆಯಾಗಿ ಕೊಟ್ಟರು. ನಾನು ಅವುಗಳಲ್ಲಿ ಸುಮಾರು 9 ರಿಂದ 10 ವರ್ಷಗಳವರೆಗೆ ಕಾರ್ಯವನ್ನು ಮುಂದುವರಿಸಿ ಪರಿಸ್ಥಿತಿಯ ಒತ್ತಡದಿಂದಾಗಿ ಅದನ್ನು ಬಿಡಬೇಕಾಯಿತು. ಆ ವಿವರಗಳೆಲ್ಲವನ್ನು ಇಲ್ಲಿ ಹೇಳುವುದು ಉಚಿತವಲ್ಲ. ಈ ಹೆಣ್ಣುಮಕ್ಕಳ ಶಾಲೆಗಳು ಇಂದಿಗೂ ಅಸ್ತಿತ್ವದಲ್ಲಿದೆ. ಸಮಿತಿಯು ಅದನ್ನು ಶಿಕ್ಷಣ ಇಲಾಖೆಗೆ ವಹಿಸಿದ ಮೇಲೆ ಅದೀಗ ಮಿಸೆಸ್ ಮಿಚೆಲ್ ಅವರ ಆಡಳಿತದಲ್ಲಿದೆ. ಮಹಾರ್ ಹಾಗೂ ಮಾಂಗ್ ಜನಾಂಗದ ಕೆಳವರ್ಗಗಳ ಒಂದು ಶಾಲೆ ಸಹ ಪ್ರಸ್ತುತ ಅಸ್ತಿತ್ವದಲ್ಲಿದ್ದರೂ ಸಹ ಅಲ್ಲಿ ತೃಪ್ತಿಕರ ಪರಿಸ್ಥಿತಿಯಿಲ್ಲ. ನಾನು ಸಹ ಕೆಲವು ವರ್ಷಗಳವರೆಗೆ ಮಿಷನರಿಗಳ ಹೆಣ್ಣುಮಕ್ಕಳ ಶಾಲೆಯಲ್ಲಿ ಶಿಕ್ಷಕನಾಗಿದ್ದೆ. ಈ ಶಾಲೆಗಳ ಸಂಬಂಧದಿಂದ ನಾನು ಪ್ರಧಾನವಾಗಿ ನನ್ನ ಅನುಭವವನ್ನು ಗಳಿಸಲು ಸಾಧ್ಯವಾಯಿತು.

ಈ ಸಂಸ್ಥಾನದಲ್ಲಿ ಲಭ್ಯವಿರುವ ಪ್ರಾಥಮಿಕ ಶಿಕ್ಷಣದ ಕಡೆಗೆ ನನ್ನ ಗಮನವನ್ನು ಹರಿಸಿದಾಗ ಶಿಕ್ಷಣ ಇಲಾಖೆಯ ಪ್ರಾಥಮಿಕ ಶಾಲೆಗಳ ವ್ಯವಸ್ಥೆ ಹಾಗೂ ಸಿಬ್ಬಂದಿಯ ಬಗ್ಗೆ ಅಭಿಪ್ರಾಯವನ್ನು ರೂಪಿಸಿಕೊಳ್ಳುವ ಕೆಲವು ಅವಕಾಶಗಳುಂಟಾದವು. ನಾನು ಕೆಲವು ವರ್ಷಗಳ ಹಿಂದೆ ಬ್ರಾಹ್ಮಣರ ಧಾರ್ಮಿಕ ಆಚರಣೆಗಳನ್ನು ಬಯಲಿಗೆಳೆಯುವ ಒಂದು ಮರಾಠಿ ಕರಪತ್ರವನ್ನು ಬರೆದೆ. ಆಕಸ್ಮಿಕವಾಗಿ ಅದರೊಳಗೆ ಇನ್ನಿತರ ವಿಷಯಗಳ ನಡುವೆ ಪ್ರಸ್ತುತ ಶಿಕ್ಷಣ ವ್ಯವಸ್ಥೆಯ ವಿಷಯವು ಪ್ರಸ್ತಾವವಾಗಿತ್ತು. ಬ್ರಾಹ್ಮಣರ ಮತ್ತು ಇತರ ಉನ್ನತ ವರ್ಗಗಳ ಉನ್ನತ ಶಿಕ್ಷಣಕ್ಕಾಗಿ ಮಾತ್ರ ಸಾಕಷ್ಟು ಹಣವನ್ನು ಒದಗಿಸಿ ಉಳಿದ ಜನ ಸಮೂಹವು ಅಜ್ಞಾನ ಮತ್ತು ಬಡತನದಲ್ಲಿ ನರಳುವಂತೆ ಮಾಡಲಾಗಿತ್ತು. ಆ ಪುಸ್ತಕದಲ್ಲಿ ವ್ಯಕ್ತವಾದ ನಿಲುವುಗಳನ್ನು ಸಂಕ್ಷಿಪ್ತಗೊಳಿಸಿ ಒಂದು ಇಂಗ್ಲಿಷ್ ಭಾಷೆಯ ಮುನ್ನುಡಿಯನ್ನು ಸೇರಿಸಿದ್ದೆ. ಪ್ರಸ್ತುತ ವಿಚಾರಣೆಗೆ ಸಂಬಂಧಪಟ್ಟ ಭಾಗಗಳನ್ನು ಇಲ್ಲಿ ಉದ್ಧರಿಸುತ್ತಿದ್ದೇನೆ:-

'ವಿಷಯವನ್ನು ಈ ಬಿಕ್ಕಟ್ಟಿನ ಪರಿಸ್ಥಿತಿಗೆ ತಂದು ಮುಟ್ಟಿಸಿದ್ದಕ್ಕಾಗಿ ಬಹುಶಃ ಸರ್ಕಾರವನ್ನೇ ನಾವು ಕೆಲಮಟ್ಟಿಗೆ ನ್ಯಾಯಯುತವಾಗಿ ಹೊಣೆ ಮಾಡಬೇಕಾಗುತ್ತದೆ. ಉನ್ನತ ಶಿಕ್ಷಣಕ್ಕೆ ಸಾಕಷ್ಟು ಹಣವನ್ನು ಹಾಗೂ ಹೆಚ್ಚು ಸೌರ್ಯಗಳನ್ನು ಒದಗಿಸುವಲ್ಲಿ ಸರ್ಕಾರದ ಉದ್ದೇಶಗಳೇನೇ ಇದ್ದರೂ, ಸರ್ಕಾರವು ಜನ ಸಮೂಹಗಳನ್ನು ಅಲಕ್ಷ್ಯ ಮಾಡಿರುವುದು ನ್ಯಾಯಸಮ್ಮತವಲ್ಲವೆಂದು ಹೇಳಲೇಬೇಕಾಗುತ್ತದೆ. ಅದು ಈ ರೀತಿ ಆಗಬಾರದಿತ್ತು. ಭಾರತ ಸಾಮ್ರಾಜ್ಯದ ಆದಾಯದಲ್ಲಿ ಬಹುತೇಕ ಭಾಗವನ್ನು ರೈತರ ಶ್ರಮದಿಂದ ತೆಗೆದುಕೊಳ್ಳಲಾಗುತ್ತಿದೆ, ಅದು ಅವರ ದುಡಿಮೆಯ ಬೆವರಿನಿಂದ ಬಂದುದಾಗಿದೆ ಎನ್ನುವುದು ಎಲ್ಲರಿಗೂ ಗೊತ್ತಿರುವ ಸಂಗತಿ. ಉನ್ನತ ಹಾಗೂ ಶ್ರೀಮಂತ ವರ್ಗಗಳು ರಾಜ್ಯ ಬೊಕ್ಕಸಕ್ಕೆ ಅತಿ ಕಡಮೆ ಕಾಣಿಕೆ ನೀಡುತ್ತವೆ ಅಥವಾ ಏನನ್ನೂ ನೀಡುತ್ತಿಲ್ಲವೆಂದೇ ಹೇಳಬಹುದು. ಒಳ್ಳೆ ಮಾಹಿತಿಯುಳ್ಳ ಇಂಗ್ಲಿಷ್ ಲೇಖಕನೊಬ್ಬ ಈ ರೀತಿ ಹೇಳುತ್ತಾನೆ: ``ನಮ್ಮ ವರಮಾನವನ್ನು ನಾವು ಹೆಚ್ಚುವರಿ ಲಾಭದಿಂದ ಗಳಿಸುತ್ತಿಲ್ಲ ಅದನ್ನು ನಮ್ಮ ಬಂಡವಾಳದಿಂದ ಗಳಿಸುತ್ತಿದ್ದೇವೆ. ಅದನ್ನು ಐಷಾರಾಮದಿಂದ ಗಳಿಸುತ್ತಿಲ್ಲ. ಬದಲಾಗಿ ಕನಿಷ್ಠ ಆವಶ್ಯಕತೆಗಳಿಂದ ಗಳಿಸುತ್ತಿದ್ದೇವೆ. ಅದು ಪಾಪ ಮತ್ತು ಕಣ್ಣೀರಿನ ಉತ್ಪತ್ತಿಯಾಗಿದೆ.''

ಏನೇ ಆದರೂ ಹೀಗೆ ಸಂಗ್ರಹಿಸಿದ ಆದಾಯದ ಬಹುಭಾಗವನ್ನು ಸರ್ಕಾರವು ಉನ್ನತ ವರ್ಗಗಳ ಶಿಕ್ಷಣಕ್ಕಾಗಿ ಅಪಾರವಾಗಿ ಖರ್ಚು ಮಾಡುವುದು ನ್ಯಾಯ ಅಥವಾ ಸಮಾನತೆಯಾಗುವುದಿಲ್ಲ. ಅದರ ಲಾಭ ಪಡೆಯುವವರು ಅವರೇ. ಉನ್ನತ ಶಿಕ್ಷಣದ ಅವರ ಉದ್ದೇಶ ವಸ್ತುತಃ ವಿದ್ಯೆಯನ್ನು ಯಾವುದೇ ಬೆಲೆಯಿಲ್ಲದೆ ಅಥವಾ ಹಣವಿಲ್ಲದೆ ಮಾರಾಟ ಮಾಡುವ ವಿದ್ವಾಂಸರನ್ನು ತಯಾರಿ ಮಾಡುವ ಸಲುವಾಗಿ ಎಂಬಂತೆ ಕಂಡುಬರುತ್ತದೆ. ಅವರು ಹೀಗೆ ಹೇಳುತ್ತಾರೆ: ನಾವು ಉನ್ನತ ವರ್ಗಗಳ ಮನಸ್ಸಿನಲ್ಲಿ ಜ್ಞಾನದ ಬಗ್ಗೆ ಪ್ರೇಮ

ಬರುವಂತೆ ಸ್ಫೂರ್ತಿ ತುಂಬಿದರೆ ಅದು ಉನ್ನತಮಟ್ಟವನ್ನು ತರುವ ಫಲಿತಾಂಶವನ್ನು ಹೊಂದಿರುತ್ತದೆ. ಅದು ವ್ಯಕ್ತಿಗಳಲ್ಲಿ ನೀತಿಗಳನ್ನು ಬೆಳೆಸುತ್ತದೆ ಹಾಗೂ ಬ್ರಿಟಿಷ್ ಸರ್ಕಾರದ ಬಗ್ಗೆ ಅವರಲ್ಲಿ ಮಮತೆ ಮೂಡಿಸುತ್ತದೆ, ಮತ್ತು ತಾವು ಗಳಿಸಿದ ಬೌದ್ಧಿಕ ಫಲಿತಗಳನ್ನು ತಮ್ಮ ದೇಶವಾಸಿಗಳಲ್ಲಿ ಹರಡುವ ಅದಮ್ಯ ಆಕಾಂಕ್ಷೆಯನ್ನು ಅವರು ಹೊಂದುತ್ತಾರೆ.

ಮೇಲೆ ಪ್ರಸ್ತಾವಿಸಿದ ಲೇಖಕರು ಸರ್ಕಾರದ ಈ ಉದ್ದೇಶಗಳ ಬಗ್ಗೆ "ಇದಕ್ಕಿಂತ ಉದಾತ್ತವಾದ, ಆದರ್ಶಮಯವಾದ ಸಿದ್ಧಾಂತವನ್ನು ಎಲ್ಲಿಯೂ ಕೇಳಿಲ್ಲ"ವೆಂದು ಹೇಳುತ್ತಾರೆ. ಪಾಶ್ಚಿಮಾತ್ಯ ಜಗತ್ತಿನಲ್ಲಿ ಆಶ್ಚರ್ಯಕರ ಬದಲಾವಣೆಗಳಿಗೆ ಸಾಕ್ಷಿಯಾದ ಜನರು ಕೇವಲ ಜನಪ್ರಿಯ ಜ್ಞಾನದ ಆಧಾರದ ಮೇಲೆ ಮೇಲ್ವರ್ಗದ ಜನರಿಗೆ ಮತ್ತು ಅವರಿಗೆ ಮಾತ್ರ ಉನ್ನತ ಶಿಕ್ಷಣ ನೀಡುವುದರಿಂದ ಇನ್ನೂರು ದಶಲಕ್ಷ ಜನರ ದೋಷಗಳನ್ನು ಪರಿಹರಿಸಬಹುದೆಂದು ಪ್ರಸ್ತಾವ ಮಾಡುತ್ತಾರೆ. ಈ ಸಿದ್ಧಾಂತದ ಸತ್ಯವನ್ನು ನಿರೂಪಿಸಲು ತಮ್ಮ ಅನುಭವಗಳ ಅನೇಕ ನಿದರ್ಶನಗಳ ಮೂಲಕ ತಮ್ಮ ವ್ಯಾಪ್ತಿಯಲ್ಲಿರುವ ಒಂದೇ ಒಂದು ಉದಾಹರಣೆಯನ್ನು ಒದಗಿಸಬೇಕೆಂದು ನಾವು ಭಾರತೀಯ ವಿಶ್ವವಿದ್ಯಾಲಯಗಳ ನಮ್ಮ ಗೆಳೆಯರಲ್ಲಿ ಕೇಳುತ್ತೇವೆ. ಅವರು ಅನೇಕ ಶ್ರೀಮಂತರ ಮಕ್ಕಳಿಗೆ ಶಿಕ್ಷಣ ನೀಡಿ ಕೆಲವು ವಿದ್ಯಾರ್ಥಿಗಳ ಪ್ರಾಪಂಚಿಕ ಹಾಗೂ ಭೌತಿಕ ಭವಿಷ್ಯಕ್ಕೆ ಸಾಧನವಾಗಿದ್ದಾರೆ. ಆದರೆ ಅವರ ಸಹವರ್ತಿಗಳ ಪುನರುಜ್ಜೀವನಕ್ಕಾಗಿ ಅವರು ಮಾಡಿದ ಮಹಾನ್ ಕಾರ್ಯವಾದರೂ ಏನು? ಅವರು ಜನ ಸಮುದಾಯಕ್ಕಾಗಿ ಯಾವ ರೀತಿಯಲ್ಲಿ ಕ್ರಿಯಾಶೀಲರಾಗಿದ್ದಾರೆ? ಅವರಲ್ಲಿ ಯಾರಾದರೂ ಕಡಮೆ ಬುದ್ಧಿಶಕ್ತಿಯುಳ್ಳ ಅಥವಾ ನತದೃಷ್ಟರಾದ ದೇಶವಾಸಿಗಳಿಗೆ ಶಿಕ್ಷಣ ನೀಡಲು ತಮ್ಮ ಮನೆಗಳಲ್ಲಾಗಲೀ ಅಥವಾ ಬೇರೆಲ್ಲಾದರಾಗಲಿ ತರಗತಿಗಳನ್ನು ನಡೆಸುತ್ತಿರುವರೇ? ಅಥವಾ ತಮ್ಮ ಜ್ಞಾನವನ್ನು ವೈಯಕ್ತಿಕ ಬಳುವಳಿಯಂತೆ ತಮ್ಮಲ್ಲೇ ಉಳಿಸಿಕೊಂಡು ತುಚ್ಛ ಅಜ್ಞಾನಿಗಳ ಸಂಪರ್ಕದಿಂದ ಅದು ಕಲುಷಿತಗೊಳ್ಳಬಾರದೆಂದು ಭಾವಿಸಿರುವರೆ? ಅವರ ಪೈಕಿ ಯಾರಾದರೂ ಸಾರ್ವತ್ರಿಕ ಹಿತಾಸಕ್ತಿಗಳನ್ನು ಸುಧಾರಿಸಲು ಮತ್ತು ದೇಶ ಪ್ರೇಮದೊಂದಿಗೆ ಲೋಕೋಪಕಾರಕ್ಕೆ ಮುಂದಾಗಲು ಯತ್ನಿಸಿರುವುದುಂಟೇ? ಜನರ ನೈತಿಕ ಮತ್ತು ಬೌದ್ಧಿಕ ಕಲ್ಯಾಣದ ಉನ್ನತಿಗಾಗಿ ಮೇಲ್ವರ್ಗಗಳಲ್ಲಿ ಶಿಕ್ಷಣ ಮಟ್ಟವನ್ನು ಎತ್ತರಿಸುವುದೇ ಅತ್ಯುತ್ತಮ ವಿಧಾನವೆಂದು ಯಾವ ಆಧಾರದ ಮೇಲೆ ಹೇಳಲಾಗಿದೆ? ಇದು ಕುಲೀನ ಜನರಿಗೆ ಮಾತ್ರ ಅಮೋಘವಾದವಾಗಿದ್ದು ಅವರಿಗೆ ಮಾತ್ರ ಸಹ್ಯವಾಗಿದೆ. ರಾಷ್ಟ್ರದ ಸಂತೃಪ್ತಿಯ ಬೆಳವಣಿಗೆಯನ್ನು ತೋರಿಸಲು ಕಾಲೇಜುಗಳಲ್ಲಿನ ವಿದ್ಯಾರ್ಥಿಗಳ ಸಂಖ್ಯೆ ಮತ್ತು ಶೈಕ್ಷಣಿಕ ಪದವಿಗಳ ಪಟ್ಟಿ ಆವಶ್ಯಕವಾಗುತ್ತದೆ. ಪ್ರಥಮ ಶ್ರೇಣಿಯಲ್ಲಿ ತೇರ್ಗಡೆಯಾದವನು ರಾಷ್ಟ್ರೀಯ ಫಲಾನುಭವಿಯಾಗುತ್ತಾನೆ. ಅದರೊಂದಿಗೆ ಇತರ ಡೀನ್‌ಗಳು ಹಾಗೂ ಪ್ರೊಫೆಸರ್‌ಗಳು ಸೇರುತ್ತಾರೆ. ಆದರೆ ಇದೆಲ್ಲವೂ ಸಂವಿಧಾನದ ಹಿತಾಸಕ್ತಿಗಳಿಗಾಗಿ ಎಂದು ಹೇಳಲಾಗುತ್ತದೆ.

ಸರ್ಕಾರದ ಮೇಲ್ವರ್ಗ ಶಿಕ್ಷಣ ಪದ್ಧತಿಯಲ್ಲಿ ಎದ್ದು ಕಾಣುವ ಪ್ರವೃತ್ತಿಯೆಂದರೆ ವಸ್ತುತಃ ಎಲ್ಲ ಉನ್ನತ ಕಛೇರಿಗಳು ಬ್ರಾಹ್ಮಣರ ಕೆಳಗಿದ್ದು ಅವರ ಏಕಸ್ವಾಮ್ಯವಾಗಿದೆ. ರೈತರ ಕಲ್ಯಾಣವೆಂಬುದು ಹೃದಯದಲ್ಲಿದ್ದರೆ, ಅನೇಕ ತರಹದ ದುರ್ಬಳಕೆಗಳನ್ನು ತಡೆಯುವುದು ಸರ್ಕಾರದ ಕರ್ತವ್ಯವಾಗಿದ್ದರೆ, ದಿನೇ ದಿನೇ ಈ ಏಕಸ್ವಾಮ್ಯವನ್ನು ತಗ್ಗಿಸಿ ಇತರ ಜಾತಿಗಳ ಜನರು ಸಾರ್ವಜನಿಕ ಸೇವೆಗಳಿಗೆ ಪ್ರವೇಶಿಸುವುದನ್ನು ಉತ್ತೇಜಿಸಬೇಕಾಗುತ್ತದೆ. ಪ್ರಸ್ತುತ ಶೈಕ್ಷಣಿಕ ಪರಿಸ್ಥಿತಿಯಲ್ಲಿ ಇದು ಸಾಧ್ಯವಿಲ್ಲವೆಂದು ಕೆಲವರು ಹೇಳಬಹುದು. ಇದಕ್ಕೆ ನಮ್ಮ ಉತ್ತರವೆಂದರೆ ಸರ್ಕಾರವು ಉನ್ನತ ಶಿಕ್ಷಣದ ಬಗ್ಗೆ ಇರುವ ಗಮನವನ್ನು ಸ್ವಲ್ಪ ಜನಸಮೂಹದ ಶಿಕ್ಷಣದ ಕಡೆಗೆ ಹರಿಸಿದರೆ ಸರ್ಕಾರದ ಕೆಲಸಗಳನ್ನು ನಿರ್ವಹಿಸಲು ಬಹುಶಃ ಒಂದು ಸಮೂಹವನ್ನೆ ತರಬೇತಿಗೊಳಿಸಬಹುದು. ಅವರು ಎಲ್ಲ ರೀತಿಯಲ್ಲೂ ಅದನ್ನು ನಿರ್ವಹಿಸಲು ಸಮರ್ಥರಿರುತ್ತಾರೆ ಮತ್ತು ನೀತಿ ಹಾಗೂ ರಿವಾಜುಗಳಲ್ಲಿ ಬಹುಶಃ ಇನ್ನೂ ಉತ್ತಮರಾಗಿರುತ್ತಾರೆ.

ಪ್ರಸಕ್ತ ಸಂಪುಟವನ್ನು ಬರೆಯುವ ನನ್ನ ಉದ್ದೇಶವೆಂದರೆ ಅದು ನನ್ನ ಶೂದ್ರ ಸಹೋದರರರು ಬ್ರಾಹ್ಮಣರಿಂದ ಹೇಗೆ ವಂಚಿತರಾಗಿದ್ದರೆಂಬುದನ್ನು ಹೇಳುವುದಷ್ಟೆ ಅಲ್ಲ, ಮೇಲ್ವರ್ಗ ಶಿಕ್ಷಣದ ಹಾನಿಕಾರಕ ಪದ್ಧತಿಯ ಬಗ್ಗೆ ಸರ್ಕಾರದ ಕಣ್ಣುತೆರೆಸುವ ಉದ್ದೇಶವನ್ನು ಹೊಂದಿದೆ. ಇದುವರೆಗೆ ಈ ಪದ್ಧತಿಯನ್ನು ಸತತವಾಗಿ ಅನುಸರಿಸಲಾಗಿದೆ. ಪ್ರಸ್ತುತ ಬಂಗಾಳದ ಲೆಫ್ಟಿನೆಂಟ್ ಗವರ್ನರ್ ಮತ್ತು ಮುತ್ಸದ್ದಿ ಜಾರ್ಜ್ ಕ್ಯಾಂಪ್ ಬೆಲ್ ರಂತಹ ವಿಶಾಲ ಸಾರ್ವತ್ರಿಕ ಸಹಾನುಭೂತಿ ಹೊಂದಿರುವವರು ಸಹ ಈ ಪದ್ಧತಿ ಅತ್ಯಂತ ಹಾನಿಕಾರಕ ಮತ್ತು ಕೇಡು ತರುವಂತಹ ಪದ್ಧತಿಯೆಂಬುದನ್ನು ಕಂಡುಕೊಂಡಿದ್ದಾರೆ. ಅದು ಸರ್ಕಾರದ ಹಿತಾಸಕ್ತಿಗಳಿಗೆ ಮಾರಕವಾಗಿದೆ. ಸರ್ಕಾರವು ತನ್ನ ತಪ್ಪು ದಾರಿಗಳನ್ನು ಕಣ್ಣುಬಿಟ್ಟು ನೋಡುವುದೆಂಬ ಪ್ರಾಮಾಣಿಕ ಭರವಸೆಯನ್ನು ನಾನು ಇಟ್ಟಿದ್ದೇನೆ. ಉನ್ನತ ವರ್ಗದ ಕನ್ನಡಕಗಳನ್ನು ಧರಿಸಿ ನೋಡುವ ಲೇಖಕರು ಅಥವಾ ವ್ಯಕ್ತಿಗಳಲ್ಲಿ ನನಗೆ ವಿಶ್ವಾಸವಿಲ್ಲ. ಅಂತಹ ಜನರು ನನ್ನ ಸೋದರರರಾದ ಶೂದ್ರರನ್ನು ಬಂಧನದ ಬಲೆಗಳಿಂದ ಮತ್ತು ಬ್ರಾಹ್ಮಣರು ಅವರ ಸುತ್ತ ಹೆಣೆದಿರುವ ಸರ್ಪಬಂಧದಿಂದ ವಿಮೋಚನೆಗೊಳಿಸಿದ ಕೀರ್ತಿಯನ್ನು ತಮ್ಮ ಕೈವಶ ಮಾಡಿಕೊಳ್ಳುತ್ತಾರೆ. ಯಾವುದೇ ಶಿಕ್ಷಣ ಪಡೆದಿರುವ ನನ್ನ ಶೂದ್ರ ಸೋದರರ ಕರ್ತವ್ಯವೇನೂ ಕಡಮೆಯಿಲ್ಲ. ಅವರು ಸರ್ಕಾರದ ಮುಂದೆ ತಮ್ಮ ಹಾಗೂ ತಮ್ಮ ಸಹವರ್ತಿಗಳ ವಾಸ್ತವಿಕ ಪರಿಸ್ಥಿತಿಯನ್ನು ವಿವರಿಸಿ ಬ್ರಾಹ್ಮಣ ಗುಲಾಮಗಿರಿಯಿಂದ ವಿಮೋಚನೆ ಹೊಂದಲು ತಮ್ಮ ಶಕ್ತಿ ಸಾಮರ್ಥ್ಯವನ್ನೆಲ್ಲ ಬಳಸಬೇಕಾಗಿದೆ. ಪ್ರತಿಯೊಂದು ಹಳ್ಳಿಯಲ್ಲೂ ಶೂದ್ರರಿಗಾಗಿ ಶಾಲೆಗಳಿರಲಿ ಆದರೆ ಅವೆಲ್ಲವೂ ಬ್ರಾಹ್ಮಣ ಶಿಕ್ಷಕರಿಂದ ಮುಕ್ತವಾಗಿರಲಿ! ಶೂದ್ರರೇ ಈ ದೇಶದ ಜೀವಾಳ ಮತ್ತು ನರನಾಡಿಗಳು. ಸರ್ಕಾರವು ಅವರು ಕಷ್ಟಗಳನ್ನು ದಾಟುವಂತೆ ನೋಡಿಕೊಳ್ಳಬೇಕೇ ಹೊರತು ಬ್ರಾಹ್ಮಣರ ಸಮಸ್ಯೆಗಳನ್ನಲ್ಲ. ರಾಜಕೀಯವಾಗಿ

ಹಾಗೂ ಆರ್ಥಿಕವಾಗಿಅವರನ್ನು ಮೇಲೆತ್ತಬೇಕು. ಶೂದ್ರರ ಹೃದಯ ಮತ್ತು ಮನಸ್ಸುಗಳನ್ನು ಸಂತೃಪ್ತಗೊಳಿಸಲು ಸಾಧ್ಯವಾದರೆ ಭವಿಷ್ಯದಲ್ಲಿ ಬ್ರಿಟಿಷ್ ಸರ್ಕಾರಕ್ಕೆಅವರ ನಿಷ್ಠೆಯ ಬಗ್ಗೆ ಹೆದರಿಕೆ ಬೇಡ.

## ಪ್ರಾಥಮಿಕ ಶಿಕ್ಷಣ

ಈ ಸಂಸ್ಥಾನದಲ್ಲಿ ಸಮುದಾಯಗಳ ಪ್ರಾಥಮಿಕ ಶಿಕ್ಷಣ ಹೆಚ್ಚು ಅಲಕ್ಷ್ಯಕ್ಕೊಳಗಾಗಿದೆಯೆಂಬುದರಲ್ಲಿ ಸ್ವಲ್ಪವೂ ಅನುಮಾನವಿಲ್ಲ. ಈಗ ಅಸ್ತಿತ್ವದಲ್ಲಿರುವ ಪ್ರಾಥಮಿಕ ಶಾಲೆಗಳ ಸಂಖ್ಯೆ ಕೆಲವು ವರ್ಷಗಳ ಹಿಂದಿನ ಸಂಖ್ಯೆಗಿಂತ ಹೆಚ್ಚಿದ್ದರೂ ಸಹ ಸಮುದಾಯದ ಅಗತ್ಯಗಳಿಗೆ ಸಾಕಾಗುವಷ್ಟಿಲ್ಲ. ಸರ್ಕಾರವು ಶೈಕ್ಷಣಿಕ ಉದ್ದೇಶಗಳಿಗಾಗಿ ಒಂದು ವಿಶೇಷ ತೆರಿಗೆಯನ್ನು ಸಂಗ್ರಹಿಸುತ್ತಿದ್ದರೂ ಸಹ ಅದನ್ನು ಆ ಉದ್ದೇಶಕ್ಕಾಗಿ ವೆಚ್ಚ ಮಾಡುತ್ತಿಲ್ಲ ಎಂಬುದು ವಿಷಾದನೀಯ. ಈ ಸಂಸ್ಥಾನದ ಶೇಕಡ 90ರಷ್ಟು ಹಳ್ಳಿಗಳು ಅಥವಾ 10 ಲಕ್ಷ ಸಂಖ್ಯೆಗೆ ಸಮೀಪವಿರುವ ಒಟ್ಟಾರೆ ಮಕ್ಕಳು ಪ್ರಾಥಮಿಕ ಶಿಕ್ಷಣಕ್ಕೆ ಅವರಿಗಿರಬೇಕಾದ ಯಾವುದೇ ಸೌಲಭ್ಯವನ್ನು ಪಡೆಯುತ್ತಿಲ್ಲ. ಅವರಿಗಿರುವ ಬಡತನ ಅವರ ಸ್ವಾವಲಂಬನೆಯ ಕೊರತೆ, ಕಲಿತ ಮತ್ತು ಬುದ್ಧಿಶಾಲಿ ವರ್ಗಗಳ ಮೇಲಿರುವ ಅವರ ಸಂಪೂರ್ಣ ಅವಲಂಬನೆ ಇವೆಲ್ಲವೂ ರೈತರ ಶೋಚನೀಯ ಶೈಕ್ಷಣಿಕ ಸ್ಥಿತಿಗೆ ಕಾರಣವಾಗಿವೆ.

ಪಟ್ಟಣಗಳಲ್ಲೂ ಸಹ ಸಾಮಾನ್ಯವಾಗಿ ಬರವಣಿಗೆಯ ವೃತ್ತಿಯಿಂದ ಜೀವಿಸುವ ಆನುವಂಶಿಕ ವರ್ಗಗಳಾದ ಬ್ರಾಹ್ಮಣರು ಪುರ್‌ಭೂಗಳು ಮತ್ತು ವ್ಯಾಪಾರಿ ವರ್ಗಗಳು ಪ್ರಾಥಮಿಕ ಶಿಕ್ಷಣವನ್ನು ಪಡೆಯುತ್ತವೆ. ಕೃಷಿಕರು ಮತ್ತು ಇನ್ನಿತರ ವರ್ಗಗಳು ಸಾಮಾನ್ಯವಾಗಿ ಶಿಕ್ಷಣದ ಸೌಲಭ್ಯವನ್ನು ಪಡೆದುಕೊಳ್ಳದಿರುವುದು ಇಲ್ಲಿ ಒಂದು ನಿಯಮವೇ ಆಗಿಬಿಟ್ಟಿದೆ. ಈ ವರ್ಗಗಳಲ್ಲಿ ಕೆಲವರು ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣದಲ್ಲಿ ಕಂಡುಬರುತ್ತಾರೆ. ಆದರೆ ಬಡತನ ಹಾಗೂ ಇನ್ನಿತರ ಕಾರಣಗಳಿಂದಾಗಿ ಅವರು ಶಾಲೆಗಳಲ್ಲಿ ಮುಂದುವರಿಯಲಾಗುವುದಿಲ್ಲ. ಅವರು ಶಾಲೆಗಳಲ್ಲಿ ಮುಂದುವರಿಯಲು ಯಾವುದೇ ವಿಶೇಷವಾದ ಉತ್ತೇಜನವಿಲ್ಲದಿರುವುದರಿಂದ ಸಹಜವಾಗಿ ಅವರು ಬೇಗನೆ ಶಾಲೆಗಳನ್ನು ಬಿಟ್ಟು ಮನೆಗೆಲಸದಅಥವಾ ಇನ್ಯಾವುದೇ ಬೇರೆಯ ವೃತ್ತಿಯನ್ನು ಹಿಡಿಯುತ್ತಾರೆ. ಹಳ್ಳಿಗಳಲ್ಲೂ ಸಹ ಕೃಷಿಕ ವರ್ಗಗಳ ಬಹುತೇಕ ಮಂದಿ ಕಡುಬಡತನದಿಂದ ಅಥವಾ ದನಕಾಯುವ ಮತ್ತು ಜಮೀನು ನೋಡಿಕೊಳ್ಳುವ ಸಲುವಾಗಿ ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುವುದಿಲ್ಲ. ಶಾಲೆಗಳ ಸಂಖ್ಯೆ ಹೆಚ್ಚಾಗಿರುವುದರೊಂದಿಗೆ ವಿದ್ಯಾರ್ಥಿ ವೇತನ, ಅರೆ-ವಾರ್ಷಿಕ ಅಥವಾ ವಾರ್ಷಿಕ ಬಹುಮಾನಗಳು ಮುಂತಾದ ವಿಶೇಷ ಉತ್ತೇಜನಗಳನ್ನು ನೀಡಿ ಪೋಷಕರು ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುವಂತೆ ಪ್ರೋತ್ಸಾಹಿಸಬೇಕು ಮತ್ತು ಅವರಲ್ಲಿ ಕಲಿಕೆಯ ಬಗ್ಗೆ ಅಭಿರುಚಿಯನ್ನು ಸೃಷ್ಟಿಸಬೇಕು. ಇದು ಅತ್ಯಂತ ಆವಶ್ಯಕ. ಜನ ಸಮೂಹಗಳಿಗೆ ಕಡೆಯ ಪಕ್ಷ 12

ವರ್ಷಗಳವರೆಗೆ ಪ್ರಾಥಮಿಕ ಶಿಕ್ಷಣವನ್ನು ಕಡ್ಡಾಯ ಮಾಡಬೇಕೆಂದು ನನಗನ್ನಿಸುತ್ತದೆ. ಮುಸ್ಲಿಂಧರ್ಮದವರೂ ಸಹ ಈ ಶಾಲೆಗಳಿಂದ ತಮ್ಮನ್ನು ದೂರವಿರಿಸಿಕೊಂಡಿದ್ದಾರೆ. ಈ ಶಾಲೆಗಳು ಮರಾಠಿ ಅಥವಾ ಇಂಗ್ಲಿಷ್ ಭಾಷೆಗಳ ಸಂಪರ್ಕತರುವುದಿಲ್ಲ. ಕೆಲವು ಮುಸ್ಲಿಂ ಪ್ರಾಥಮಿಕ ಶಾಲೆಗಳಲ್ಲಿ ಅವರು ಸ್ವಂತ ಭಾಷೆಯನ್ನು ಕಲಿಸುತ್ತಾರೆ. ಮಹಾರರು ಮತ್ತು ಮಾಂಗರು ಹಾಗೂ ಇನ್ನಿತರ ಕೆಳವರ್ಗಗಳನ್ನು ವಾಸ್ತವಿಕವಾಗಿ ಎಲ್ಲ ಶಾಲೆಗಳಿಂದ ಹೊರಗಿರಿಸಲಾಗಿದೆ. ಜಾತಿ ಪೂರ್ವಗ್ರಹಗಳ ದೆಸೆಯಿಂದಾಗಿ ಆ ಕೆಳವರ್ಗಕ್ಕೆ ಸೇರಿದ ಮಕ್ಕಳು ಮೇಲ್ವರ್ಗದ ಮಕ್ಕಳ ಪಕ್ಕದಲ್ಲಿ ಕುಳಿತುಕೊಳ್ಳುವಂತಿಲ್ಲ. ತತ್ಪರಿಣಾಮವಾಗಿ ಸರ್ಕಾರವು ಇವರಿಗಾಗಿ ವಿಶೇಷ ಶಾಲೆಗಳನ್ನು ತೆರೆದಿದೆ, ಆದರೆ ಈ ಶಾಲೆಗಳು ದೊಡ್ಡಪಟ್ಟಣಗಳಲ್ಲಿ ಮಾತ್ರ ಅಸ್ತಿತ್ವದಲ್ಲಿದೆ. ಇಡಿ ಪೂನಾದಲ್ಲಿ 5000 ಜನಸಂಖ್ಯೆ ಮೀರಿದ ಜನರಿಗೆ ಒಂದೇ ಒಂದು ಶಾಲೆ ಅಸ್ತಿತ್ವದಲ್ಲಿವೆ. ಅದರಲ್ಲಿನ ಹಾಜರಾತಿ 30 ಬಾಲಕರಿಗಿಂತ ಕಡಿಮೆಇದೆ. ಇಂತಹ ಸ್ಥಿತಿ ಶೈಕ್ಷಣಿಕ ಅಧಿಕಾರಿಗಳಿಗೆ ಕೀರ್ತಿ ತರುವಂತಹ ವಿಷಯವಲ್ಲ. ಮಹಾರಾಣಿಯವರ ಘೋಷಣೆಯ ಭರವಸೆಯಡಿಯಲ್ಲಿ ಕೆಳವರ್ಗದವರಾದ ಮಹಾರರು, ಮಾಂಗ್ ಜನರು ಮತ್ತು ಇನ್ನಿತರರ ಸಂಖ್ಯಾಬಲ ಹೆಚ್ಚಿರುವ ಕಡೆಯಲ್ಲೆಲ್ಲ ಅವರಿಗಾಗಿ ಶಾಲೆಗಳನ್ನು ತೆರೆಯಬೇಕೆಂದು ನಾನು ಮನವಿ ಮಾಡುತ್ತೇನೆ ಹಾಗೂ ಆಗ್ರಹಪಡಿಸುತ್ತೇನೆ. ಜಾತಿ ಪೂರ್ವಗ್ರಹಗಳಿಂದಾಗಿ ಅವರನ್ನು ಬೇರೆ ಶಾಲೆಗಳಿಗೆ ಹಾಜರಾಗಲು ಬಿಡುತ್ತಿಲ್ಲ.

ಶಿಕ್ಷಣದ ಪ್ರಸ್ತುತ ಸ್ಥಿತಿಯಲ್ಲಿ ಬಡವರು ಹಾಗೂ ತಿಳಿವಳಿಕೆ ಇಲ್ಲದ ಜನಗಳಲ್ಲಿ ಶಿಕ್ಷಣವನ್ನು ಅಭಿವೃದ್ಧಿಪಡಿಸಲು ಫಲಿತಾಂಶದಆಧಾರದ ಮೇಲೆ ಹಣ ಸಂದಾಯ ಮಾಡುವುದು ಸೂಕ್ತವಾದ ಕ್ರಮವಲ್ಲ. ಅವರಲ್ಲಿ ಶಿಕ್ಷಣದ ಬಗ್ಗೆ ಇನ್ನೂ ಯಾವ ಅಭಿರುಚಿಯನ್ನೂ ಬೆಳೆಸಲಾಗಿಲ್ಲ. ಯಾವ ಶಿಕ್ಷಕನೇ ಆದರೂ ತನ್ನ ಸ್ವಂತ ಖರ್ಚಿನಿಂದ ಶಾಲೆಯೊಂದನ್ನು ತೆರೆದು ಈ ಜನರಿಗಾಗಿ ಶಿಕ್ಷಣ ನೀಡಬಹುದೆಂದು ನನಗನ್ನಿಸುವುದಿಲ್ಲ. ಏಕೆಂದರೆ ಅವನಿಗೆ ಹೀಗೆ ಮಾಡಿ ತನ್ನ ಜೀವನವನ್ನು ನಿರ್ವಹಿಸಲಾಗುವುದಿಲ್ಲ. ಮೇಲೆ ಹೇಳಿದಂತೆ ಅವರಲ್ಲಿ ಅಂತಹ ಅಭಿರುಚಿಯನ್ನು ಸೃಷ್ಟಿಯಾಗುವವರೆಗೂ ಸರ್ಕಾರಿ ಶಾಲೆಗಳು ಹಾಗೂ ವಿಶೇಷ ಉತ್ತೇಜನಗಳು ಅಗತ್ಯವಾಗಿರುತ್ತವೆ.

ಸಂಸ್ಥಾನದಲ್ಲಿ ಅಸ್ತಿತ್ವದಲ್ಲಿರುವ ಕೆಲವು ಸರ್ಕಾರಿ ಪ್ರಾಥಮಿಕ ಶಾಲೆಗಳಿಗೆ ಸಂಬAಧಿಸಿದಂತೆ ಅಲ್ಲಿ ನೀಡಲಾಗುತ್ತಿರುವ ಪ್ರಾಥಮಿಕ ಶಿಕ್ಷಣ ಸರಿಯಾದ ಆಧಾರವನ್ನು ಹೊಂದಿಲ್ಲ ಮತ್ತು ತೃಪ್ತಿಕರವಾಗಿಲ್ಲವೆಂಬುದನ್ನು ನಾನು ಗಮನಿಸಿದ್ದೇನೆ. ಅಲ್ಲಿನ ವ್ಯವಸ್ಥೆಯು ಸಮರ್ಪಕವಾಗಿಲ್ಲ ಮತ್ತು ವಿದ್ಯಾರ್ಥಿಗಳ ಭವಿಷ್ಯಕ್ಕೆ ಅದು ಯಾವುದೇ ಪ್ರಾಯೋಗಿಕತೆ ಮತ್ತು ಉಪಯುಕ್ತತೆಯನ್ನು ಹೊಂದಿಲ್ಲ. ಈ ವ್ಯವಸ್ಥೆಯನ್ನು ಅದು ಭವಿಷ್ಯದಲ್ಲಿ ಸಮುದಾಯದ ಅಗತ್ಯಗಳನ್ನು ಪೂರೈಸುವಂತೆ ಅಭಿವೃದ್ಧಿ ಮಾಡಿದಾಗ ಮಾತ್ರ ಅದು ಮುಂದೆ ಉಪಯುಕ್ತವಾಗುವ ಫಲಿತಾಂಶವನ್ನು ನೀಡುತ್ತದೆ. ಈಗಿರುವ ಬೋಧನ

ಸಾಧನೋಪಾಯ ಮತ್ತು ಅನುಸರಿಸಲಾಗುತ್ತಿರುವ ಶೈಕ್ಷಣಿಕಕ್ರಮ ಇವುಗಳನ್ನು ಆಮೂಲಾಗ್ರವಾಗಿ ಹೊಸದಾಗಿ ರೂಪಿಸಬೇಕಾಗಿದೆ.

ಎ) ಇದೀಗ ಪ್ರಾಥಮಿಕ ಶಾಲೆಗಳಲ್ಲಿ ನೇಮಕಗೊಂಡಿರುವ ಶಿಕ್ಷಕರಲ್ಲಿ ಬಹುತೇಕರು ಬ್ರಾಹ್ಮಣರಾಗಿದ್ದು ಅವರಲ್ಲಿ ಕೆಲವರು ಮಾತ್ರ ಸಾಮಾನ್ಯ ತರಬೇತಿ ಕಾಲೇಜಿನಿಂದ ಬಂದವರಾಗಿದ್ದಾರೆ. ಉಳಿದವರು ಯಾವುದೇ ತರಬೇತಿಯನ್ನು ಗಳಿಸಿಲ್ಲ. ಅವರ ವೇತನಗಳು ಅತ್ಯಂತ ಕಡಮೆ ಇದ್ದು ಅದು ಹತ್ತು ರೂ.ಗಳನ್ನು ದಾಟುವುದೇ ವಿರಳ. ಅವರ ಸಾಧನೆಗಳು ಸಹ ಅತ್ಯಂತ ಕನಿಷ್ಠ ಮಟ್ಟದ್ದಾಗಿವೆ. ಆದರೆ ಸಾಮಾನ್ಯವಾಗಿ ಅವರೆಲ್ಲರೂ ಕ್ರಿಯಾತ್ಮಕ ಜನರಾಗಿಲ್ಲ. ಅವರ ಕೆಳಗೆ ಕಲಿಯುವ ಬಾಲಕರು ಸಾಧಾರಣವಾಗಿ ನಿಷ್ಕ್ರೀಯ ಅಭ್ಯಾಸಗಳನ್ನು ಹೊಂದಿದ್ದು ಬೇರೆಯವರಿಂದ ಸೇವೆ ಪಡೆಯಲು ಯತ್ನಿಸುತ್ತಾರೆ. ತಮಗೆ ಆನುವಂಶಿಕವಾಗಿ ಬಂದಿರುವ ಕಠಿಣವಾದ ಅಥವಾ ಸ್ವತಂತ್ರ ವೃತ್ತಿಗಳಿಂದ ತಪ್ಪಿಸಿಕೊಳ್ಳುತ್ತಿದ್ದಾರೆ. ಪ್ರಾಥಮಿಕ ಶಾಲೆಗಳ ಶಿಕ್ಷಕರು ಸಾಧ್ಯವಿರುವಷ್ಟು ಮಟ್ಟಿಗೆ ಕೃಷಿಕ ವರ್ಗಗಳಿಂದ ತರಬೇತಿ ಹೊಂದಿ ಬಂದವರಿರಬೇಕೆಂದು ನಾನು ಯೋಚಿಸುತ್ತೇನೆ. ಅಂತಹವರು ಅವರೊಡನೆ ಕಲೆತು ಅವರ ಆವಶ್ಯಕತೆಗಳು ಮತ್ತು ಬಯಕೆಗಳನ್ನು ಅರ್ಥಮಾಡಿಕೊಳ್ಳಲು ಸಮರ್ಥರಿರುತ್ತಾರೆ. ಅವರು ಬ್ರಾಹ್ಮಣ ಶಿಕ್ಷಕರಿಗಿಂತ ಉತ್ತಮರಿರುತ್ತಾರೆ. ಏಕೆಂದರೆ ಒಬ್ಬ ಬ್ರಾಹ್ಮಣ ಶಿಕ್ಷಕನು ಸಾಮಾನ್ಯವಾಗಿ ತನ್ನ ಧಾರ್ಮಿಕ ಪೂರ್ವಗ್ರಹಗಳಿಂದಾಗಿ ಇಂಥವರಿಂದ ಪ್ರತ್ಯೇಕನಾಗಿರುತ್ತಾನೆ. ಎಲ್ಲಕ್ಕಿಂತ ಮಿಗಿಲಾಗಿ ಇಂತಹ ಕೃಷಿಕವರ್ಗದ ಶಿಕ್ಷಕರು ಇತರ ವರ್ಗದ ಶಿಕ್ಷಕರಿಗಿಂತ ಜನ ಸಮೂಹದ ಮೇಲೆ ಒಳ್ಳೆಯ ಪ್ರಭಾವವನ್ನು ಬೀರುತ್ತಾರೆ. ಅವರಿಗೆ ನೇಗಿಲಿನ ಹಿಡಿಯನ್ನು ಹಿಡಿಯಲು ಯಾವುದೇ ನಾಚಿಕೆಯಿಲ್ಲ. ಅಥವಾ ಅಗತ್ಯ ಬಿದ್ದಾಗ ಮರಗೆಲಸದ ಉಳಿಯನ್ನು ಕೈಗೆತ್ತಿಕೊಳ್ಳಲು ಹಿಂಜರಿಕೆಯಿಲ್ಲ. ಅವರು ಕೆಳವರ್ಗದ ಜನರೊಂದಿಗೆ ಕಲೆಯಲು ಸಿದ್ಧರಾಗಿರುತ್ತಾರೆ. ಅವರ ತರಬೇತಿಯ ವಿಷಯಗಳು ಇತರ ನಿಯತ ವಿಷಯಗಳೊಂದಿಗೆ ಕೃಷಿ ಮತ್ತು ಶುಚಿತ್ವ ಇವುಗಳ ಜ್ಞಾನದ ಪ್ರಾಥಮಿಕ ಅಂಶಗಳನ್ನು ಸಹ ಒಳಗೊಂಡಿರಬೇಕು. ತರಬೇತಿಯಿರದ ಶಿಕ್ಷಕರು ಸಮಗ್ರವಾಗಿ ಪರಿಣಾಮಕಾರಿಯಾಗಿಲ್ಲದಿದ್ದರೆ ಅಂತಹವರ ಬದಲಾಗಿ ತರಬೇತಿ ಹೊಂದಿದ ಸಮರ್ಥ ಶಿಕ್ಷಕರನ್ನು ನಿಯೋಜಿಸಬೇಕು. ಉತ್ತಮದರ್ಜೆಯ ಶಿಕ್ಷಕರನ್ನು ಹೊಂದಲು ಮತ್ತು ಅವರ ಸ್ಥಾನವನ್ನು ಅಭಿವೃದ್ಧಿಪಡಿಸಲು ಅವರಿಗೆ ಉತ್ತಮವಾದ ವೇತನವನ್ನು ನೀಡಬೇಕು. ಅವರ ವೇತನವು 12 ರೂ. ಗಳಿಗಿಂತ ಕಡಮೆ ಇರಬಾರದು ಮತ್ತು ದೊಡ್ಡ ಹಳ್ಳಿಗಳಲ್ಲಿ ಅದು ಕಡೆಯ ಪಕ್ಷ 15 ರೂ. ಗಳಿಂದ 20 ರೂ. ಗಳವರೆಗಿರಬೇಕು. ಅವರುಗಳನ್ನು ಹಳ್ಳಿಯ ಲೆಕ್ಕ ಪರಿಶೋಧಕರಾಗಿ, ಪತ್ರಗಳನ್ನು ಬರೆಯುವುದಕ್ಕಾಗಿ, ಹಳ್ಳಿಯ ಅಂಚೆ ಕಛೇರಿಯ ಮೇಲ್ವಿಚಾರಕರಾಗಿ ಅಥವಾ ಸ್ಟಾಂಪು ಮಾರಾಟಗಾರರಾಗಿ ತೊಡಗಿಸಿಕೊಳ್ಳುವುದರಿಂದ ಅವರ ಸ್ಥಾನಮಾನವು ಸುಧಾರಿಸುತ್ತದೆ ಮತ್ತು ಅವರು ಜೀವಿಸುವ ಸ್ಥಳದಲ್ಲಿನ ಜನರ ಮೇಲೆ ಒಳ್ಳೆಯ ಪ್ರಭಾವವನ್ನು ಬೀರುತ್ತದೆ. ಹಳ್ಳಿಯ ಶಾಲಾ-ಮಾಸ್ತರುಗಳು ಅನೇಕ ಬಾಲಕರನ್ನು ತೇರ್ಗಡೆ

ಮಾಡುವುದರಿಂದ ಅವರಿಗೆ ಏನಾದರೂ ವಿಶೇಷವಾದ ಭತ್ಯವನ್ನು ನೀಡಬೇಕು, ಅವರನ್ನು ಪ್ರೋತ್ಸಾಹಿಸುವುದಕ್ಕಾಗಿ ಅವರ ನಿಯತ ವೇತನವನ್ನು ಹೊರತುಪಡಿಸಿ ನೀಡಬೇಕಾಗುತ್ತದೆ.

ಬಿ) ಶೈಕ್ಷಣಿಕ ತರಬೇತಿಯ ವಿಷಯಗಳಲ್ಲಿ ಮೋಡಿ ಲಿಪಿಯನ್ನು ಓದುವುದು ಮತ್ತು ಬರೆಯುವುದು, ಬಾಲಬೋಧ್, ಲೆಕ್ಕ ಬರೆಯುವುದು, ಸಾಮಾನ್ಯ ಇತಿಹಾಸ ಹಾಗೂ ಭೂಗೋಳದ ಅಂಶಗಳು, ವ್ಯಾಕರಣ, ಕೃಷಿಗೆ ಸಂಬಂಧಿಸಿದ ಮೂಲ ಅಂಶಗಳು ಮತ್ತು ನೈತಿಕ ಕರ್ತವ್ಯಗಳು ಹಾಗೂ ಶುಚಿತ್ವ ಮುಂತಾದವುಗಳನ್ನು ಸೇರಿಸಬೇಕು. ದೊಡ್ಡ ಹಳ್ಳಿಗಳು ಹಾಗೂ ಪಟ್ಟಣಗಳಿಗೆ ಹೋಲಿಸಿದರೆ ಹಳ್ಳಿಯ ಶಾಲೆಗಳಲ್ಲಿನ ಅಧ್ಯಯನಗಳು ಕೆಲವೇ ಕೆಲವಾಗಿರಬಹುದು. ಆದರೆ ಅದು ನಿಷ್ಕ್ರೀಯವಾದುದಲ್ಲ. ಕೃಷಿಗೆ ಸಂಬಂಧಿಸಿದ ಪಾಠಗಳಲ್ಲಿ ಒಂದು ಸಣ್ಣ ಭೂಮಿಯ ಮಾದರಿ ಇದ್ದಲ್ಲಿ ಅದು ಬಹಳ ಪ್ರಯೋಜನಕಾರಿಯಾಗಿರುತ್ತದೆ. ಅಲ್ಲಿ ವಿದ್ಯಾರ್ಥಿಗಳಿಗೆ ಪ್ರಾಯೋಗಿಕ ಶಿಕ್ಷಣವನ್ನು ನೀಡಬಹುದು. ಅದನ್ನು ನಿಜವಾಗಿಯೂ ಪರಿಣಾಮಕಾರಿಯಾಗಿ ನಿರ್ವಹಿಸಿದರೆ ಅದು ಅತ್ಯಂತ ಅನುಕೂಲಕರವಾಗುತ್ತದೆ, ಮತ್ತು ದೇಶಕ್ಕೆ ಅದರಿಂದ ಉತ್ಪಾದಕತೆ ಹೆಚ್ಚುತ್ತದೆ. ಪ್ರಾಥಮಿಕ ಶಿಕ್ಷಣ ಮತ್ತು ಆಂಗ್ಲೋ ವರ್ನ್ಯಾಕುಲರ್ ಶಾಲೆಗಳೆರಡರ ಪಠ್ಯಪುಸ್ತಕಗಳನ್ನು ಪರಿಷ್ಕರಿಸುವ ಅಗತ್ಯವಿದೆ. ಅವುಗಳು ಪ್ರಗತಿಪರವಾಗಿಲ್ಲ ಮತ್ತು ಪ್ರಾಯೋಗಿಕವಾಗಿಯೂ ಇಲ್ಲ. ತಾಂತ್ರಿಕ ಶಿಕ್ಷಣ ಮತ್ತು ನೀತಿ, ಶುಚಿತ್ವ ಮತ್ತು ಕೃಷಿ ಈ ವಿಷಯಗಳಿಗೆ ಸಂಬಂಧಿಸಿದ ಪಾಠಗಳಲ್ಲಿ ಅಲ್ಲಲ್ಲಿ ಕೆಲವು ಪ್ರಯೋಜನಕಾರಿ ಕಲೆಗಳನ್ನು ಸಹ ಸೇರಿಸಬೇಕು. ತೆರಿಗೆ ಕಟ್ಟುವ ಹಾಗೂ ತೆರಿಗೆ ಕಟ್ಟದ ಪೋಷಕರ ಮಕ್ಕಳಿಗೆ ಪ್ರಾಥಮಿಕ ಶಾಲೆಗಳಲ್ಲಿ ಶುಲ್ಕ 1 ರೂ. ನಿಂದ 2 ರೂ. ವರೆಗೆ ಇರಬಹುದು.

ಸಿ) ಈ ಪ್ರಾಥಮಿಕ ಶಾಲೆಗಳ ಮೇಲ್ವಿಚಾರಣೆ ಅಗತ್ಯಕ್ಕೆ ತಕ್ಕಷ್ಟು ಇಲ್ಲ. ಅದು ದೋಷಪೂರಿತವಾಗಿದೆ. ವರ್ಷಕ್ಕೊಮ್ಮೆ ಭೇಟಿ ನೀಡುವ ಉಪ ನಿರೀಕ್ಷಕರ ಭೇಟಿಯಿಂದ ಯಾವುದೇ ಗಣನೀಯವಾದ ಸಾಧನೆಯೂ ಆಗುವುದಿಲ್ಲ. ಈ ಎಲ್ಲ ಶಾಲೆಗಳಿಗೂ ಕಡೆಯ ಪಕ್ಷ ಮೂರು ತಿಂಗಳಿಗೊಮ್ಮೆ ಮೇಲ್ವಿಚಾರಣೆ ನಡೆಸಬೇಕಾಗುತ್ತದೆ. ಈ ಶಾಲೆಗಳಿಗೆ ಯಾವ ಮುನ್ಸೂಚನೆಯನ್ನು ನೀಡದೇ ಬೇರೆ ಸಮಯದಲ್ಲೂ ಸಹ ಭೇಟಿ ನೀಡಬೇಕೆಂದು ನಾನು ಸಲಹೆ ಮಾಡುತ್ತೇನೆ. ಜಿಲ್ಲೆ ಹಾಗೂ ಹಳ್ಳಿಯ ಅಧಿಕಾರಿಗಳ ಮೇಲೆ ಯಾವುದೇ ಅವಲಂಬನೆಯೂ ಇರಬಾರದು. ಅವರಿಗೆ ನಾನಾ ಬಗೆಯ ಕರ್ತವ್ಯಗಳಿರುವುದರಿಂದ ಅವರ ಬಳಿ ಇದಕ್ಕೆ ಸಮಯವಿರುವುದಿಲ್ಲ. ಅವರು ಕೆಲವೊಂದು ಸಂದರ್ಭದಲ್ಲಿ ಬಿಡುವಿದ್ದಾಗ ಈ ಮೇಲ್ವಿಚಾರಣೆಯ ಕಾರ್ಯವನ್ನು ಮಾಡಿದರೂ ಸಹ ಅದು ಪೊಳ್ಳಾಗಿರುತ್ತದೆ ಮತ್ತು ಅಪರಿಪೂರ್ಣವಾಗಿರುತ್ತದೆ. ಯುರೋಪಿಯನ್ ನಿರೀಕ್ಷಕರೊಬ್ಬರು ಆಗಾಗ ಮೇಲ್ವಿಚಾರಣೆ ನಡೆಸುವುದು ಬಹಳ ಸ್ವಾಗತಾರ್ಹ. ಹೀಗೆ ಮಾಡುವುದರಿಂದ ಸಾಮಾನ್ಯವಾಗಿ ಶಿಕ್ಷಕರ ಮೇಲೆ ಬಹಳ

ಪರಿಣಾಮಕಾರಿಯಾಗಿ ನಿಯಂತ್ರಣವನ್ನು ಚಲಾಯಿಸಲು ಅನುಕೂಲವಾಗುತ್ತದೆ.

**ಡಿ) ಪ್ರಾಥಮಿಕ ಶಾಲೆಗಳ ಸಂಖ್ಯೆಯನ್ನು ಹೆಚ್ಚಿಸಬೇಕು:-**

1) ಅಂತಹ ಸ್ಥಳೀಯ ಶಾಲೆಗಳನ್ನು ತರಬೇತಿ ಹೊಂದಿದ ಮತ್ತು ಪ್ರಮಾಣ ಪತ್ರಗಳನ್ನು ಹೊಂದಿರುವ ಶಿಕ್ಷಕರನ್ನು ಬಳಸಿಕೊಂಡು ನಡೆಸಬೇಕು. ಅವರಿಗೆ ಉದಾರವಾದ ಸಹಾಯಗಳನ್ನು ಮತ್ತು ದತ್ತಿ ಹಣವನ್ನು ನೀಡಬೇಕು.
2) ಸ್ಥಳೀಯ ಶುಲ್ಕದ ನಿಧಿಯಿಂದ ಅರ್ಧಭಾಗದಷ್ಟು ಹಣವನ್ನು ಪ್ರಾಥಮಿಕ ಶಿಕ್ಷಣಕ್ಕಾಗಿ ಮಾತ್ರ ತೆಗೆದಿಡಬೇಕು.
3) ಶಾಸನವೊಂದನ್ನು ತರುವ ಮೂಲಕ ಪುರಸಭೆಗಳು ಅವುಗಳ ವ್ಯಾಪ್ತಿಯಲ್ಲಿ ಬರುವ ಎಲ್ಲ ಶಾಲೆಗಳನ್ನು ವ್ಯವಸ್ಥಿತವಾಗಿ ನೋಡಿಕೊಳ್ಳುವಂತೆ ಒತ್ತಾಯಿಸಬೇಕು.
4) ಬೇಕಾಗುವಷ್ಟು ದತ್ತಿ ನೀಡುವಂತೆ ಪ್ರಾಂತೀಯ ಅಥವಾ ಇಂಪೀರಿಯಲ್ ಸರ್ಕಾರವನ್ನು ಕೇಳಬೇಕು.

ವಿದ್ಯಾರ್ಥಿಗಳಿಗೆ ಬಹುಮಾನಗಳು ಹಾಗೂ ವಿದ್ಯಾರ್ಥಿ ವೇತನಗಳು ಮತ್ತು ಶಿಕ್ಷಕರಿಗೆ ವಂತಿಗೆ ಅಥವಾ ಭತ್ಯೆಗಳನ್ನು ಅವರ ಉತ್ತೇಜನಕ್ಕಾಗಿ ನೀಡಿದಾಗ ಈ ಶಾಲೆಗಳು ಹೆಚ್ಚು ಪರಿಣಾಮಕಾರಿಯಾಗಿ ನಡೆಯುತ್ತವೆ.

ದೊಡ್ಡ ಪಟ್ಟಣಗಳಲ್ಲಿ ಪ್ರಾಥಮಿಕ ಶಾಲೆಗಳಿಗಾಗಿ ಮಾಡುವ ಸಂಪೂರ್ಣ ವೆಚ್ಚವನ್ನು ಪುರಸಭೆಗಳೇ ಅವುಗಳ ವ್ಯಾಪ್ತಿಯಲ್ಲಿನ ಶಾಲೆಗಳಿಗೆ ಕಾಣಿಕೆ ನೀಡಬೇಕೆಂದು ಕೇಳಬೇಕು. ಆದರೆ ಯಾವುದೇ ಸಂದರ್ಭದಲ್ಲಿ ಆಯಾ ಶಾಲೆಗಳ ಆಡಳಿತ ವರ್ಗವು ಶಾಲೆಗಳನ್ನು ಸಂಪೂರ್ಣವಾಗಿ ತಮ್ಮ ಹಿಡಿತಕ್ಕೆ ತೆಗೆದುಕೊಳ್ಳಬಾರದು. ಅವರು ಶಿಕ್ಷಣ ಇಲಾಖೆಯ ಮೇಲ್ವಿಚಾರಣೆಯಡಿಯಲ್ಲಿರಬೇಕು.

ಶಿಕ್ಷಣ ಇಲಾಖೆಯ ನಿಬಂಧನೆಗಳನ್ನು ಅನುಸರಿಸಿ ನಡೆಯುತ್ತಿರುವ ಖಾಸಗಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಿಗೆ ಪುರಸಭೆಗಳು ದತ್ತಿ ಹಣವನ್ನು ಸಹಾಯವಾಗಿ ನೀಡಬೇಕು. ಅವರ ಹಣಕಾಸು ಸ್ಥಿತಿ ಅನುಮತಿ ನೀಡಿದಲ್ಲಿ ಅಂತಹ ಸಹಾಯಕದತ್ತಿ ನಿಧಿಗಳನ್ನು ನಿಯಂತ್ರಿಸಿ ಪ್ರತಿ ವರ್ಷವು ಹುಡುಗರು ತೇರ್ಗಡೆ ಹೊಂದಿದ ಸಂದರ್ಭದಲ್ಲಿ ನೀಡಬೇಕು. ಶಾಸನವೊಂದನ್ನು ಜಾರಿಗೊಳಿಸುವ ಮೂಲಕ ಪುರಸಭೆ ನಿಧಿಯಕಾಣಿಕೆಯನ್ನು ಕಡ್ಡಾಯಗೊಳಿಸಬೇಕು.

ಪ್ರಾಥಮಿಕ ಶಿಕ್ಷಣದ ನಿಧಿಯ ಆಡಳಿತ ನಿರ್ವಹಣೆಯು ಸಾಧಾರಣವಾಗಿ ಸಾರ್ವಜನಿಕ ಶಿಕ್ಷಣ ನಿರ್ದೇಶಕರ ಕೈಯ್ಯಲ್ಲಿರುತ್ತದೆ.

ಸ್ಥಳೀಯ ಅಥವಾ ಜಿಲ್ಲಾ ಸಮಿತಿಗಳ ಶಿಕ್ಷಿತ ಮತ್ತು ಬುದ್ಧಿಶಾಲಿ ವ್ಯಕ್ತಿಗಳನ್ನು ನೇಮಕ ಮಾಡಿಕೊಂಡರೆ ಈ ನಿಧಿಗಳನ್ನು ಅವರ ಹೊಣೆಗಾರಿಕೆಗೆ ಸುರಕ್ಷಿತವಾಗಿ ಒಪ್ಪಿಸಬಹುದು. ಅವರಿಗೆ ಸಾರ್ವಜನಿಕ ಶಿಕ್ಷಣ ನಿರ್ದೇಶಕರಾಗಲೀ ಅಥವಾ ಕಲೆಕ್ಟರ್ ಆಗಲೀ ಮಾರ್ಗದರ್ಶನ ಮಾಡಬಹುದು. ಆದರೆ ಪ್ರಸ್ತುತ ಈ ಸ್ಥಳೀಯ ಮಂಡಳಿಗಳ ಸದಸ್ಯರು ಅಜ್ಞಾನಿಗಳು ಹಾಗೂ ಅಶಿಕ್ಷಿತರಾಗಿರುತ್ತಾರೆ. ಅವರು ಪಟೇಲರು, ಇನಾಮ್‌ದಾರರು ಅಥವಾ ಸರ್ದಾರರು ಇತ್ಯಾದಿ ಆಗಿರುತ್ತಾರೆ. ಈ ನಿಧಿಯ ಮೇಲೆ ಅವರು ಬುದ್ಧಿವಂತಿಕೆಯಿಂದ ನಿಯಂತ್ರಣ ಚಲಾಯಿಸಲು ಅಸಮರ್ಥರಾಗಿದ್ದಾರೆ.

## ಸ್ಥಳೀಯ ಶಾಲೆಗಳು

ಅನೇಕ ನಗರಗಳಲ್ಲಿ, ಪಟ್ಟಣಗಳಲ್ಲಿ ಮತ್ತು ದೊಡ್ಡ ಹಳ್ಳಿಗಳಲ್ಲಿ ವಿಶೇಷವಾಗಿ ಬ್ರಾಹ್ಮಣರ ಜನಸಂಖ್ಯೆ ಇರುವ ಕಡೆಗಳಲ್ಲಿ ಸ್ಥಳೀಯ ಶಾಲೆಗಳು ಅಸ್ತಿತ್ವದಲ್ಲಿವೆ. ಈ ಸಂಸ್ಥಾನದಲ್ಲಿನ ಸಾರ್ವಜನಿಕ ಶಿಕ್ಷಣ ಇಲಾಖೆಯ ಇತ್ತೀಚಿನ ವರದಿಗಳಲ್ಲಿ ಕಂಡುಬರುವಂತೆ 27,694 ವಿದ್ಯಾರ್ಥಿಗಳನ್ನು ಹೊಂದಿರುವ 1,049 ಸ್ಥಳೀಯ ಶಾಲೆಗಳಿವೆ. ಅವುಗಳನ್ನು ಹಳ್ಳಿಗಳ ಹಳೇ ಮಾದರಿಯಲ್ಲಿ ನಿರ್ವಹಿಸಲಾಗುತ್ತಿದೆ. ಅಲ್ಲಿ ಬಾಲಕರಿಗೆ ಸಾಧಾರಣವಾಗಿ ಮಗ್ಗಿಯನ್ನು ಬಾಯಿಪಾಠ ಮಾಡಿಸಲಾಗುತ್ತದೆ. ಸ್ವಲ್ಪ ಮೋಡಿ ಅಕ್ಷರಗಳ ಬರವಣಿಗೆ ಮತ್ತು ಓದುವುದನ್ನು ಹಾಗೂ ಕೆಲವು ಧಾರ್ಮಿಕ ಮಂತ್ರಗಳನ್ನು ಉಚ್ಚರಿಸಲು ಹೇಳಿಕೊಡಲಾಗುತ್ತದೆ. ಸಾಮಾನ್ಯವಾಗಿ ಇಲ್ಲಿನ ಶಿಕ್ಷಕರಿಗೆ ಬೋಧನಕಲೆಯಲ್ಲಿ ಪ್ರವೇಶವಿಲ್ಲದಿರುವುದರಿಂದ ಯಾವುದೇ ಸುಧಾರಣೆಗಳನ್ನು ತರಲು ಅವರು ಸಮರ್ಥರಾಗಿರುವುದಿಲ್ಲ. ಈ ಶಾಲೆಗಳಲ್ಲಿನ ಶುಲ್ಕ ಸುಮಾರು 2 ರಿಂದ 8 ಆಣೆಗಳಷ್ಟಿದೆ. ಇಲ್ಲಿನ ಶಿಕ್ಷಕರು ಸಾಮಾನ್ಯವಾಗಿ ಬ್ರಾಹ್ಮಣ ಸಮಾಜದ ಅನುಪಯುಕ್ತ ಭಾಗಗಳಿಂದ ಬಂದವರಾಗಿರುತ್ತಾರೆ. ನಿರ್ಲಕ್ಷ್ಯದಿಂದ ಮರಾಠಿ ಓದಿ ಬರೆಯುವುದು ಮತ್ತು ಕೆಲವೊಂದು ಲೆಕ್ಕಗಳನ್ನು ಮಾಡಿಸುವುದಕ್ಕಿಂತ ಹೆಚ್ಚಿನ ವಿದ್ಯಾರ್ಹತೆ ಅವರಿಗಿರುವುದಿಲ್ಲ. ಜೀವನ ನಿರ್ವಹಣೆಗೆ ಬೇರೆಗತಿಯಿಲ್ಲದೆ, ಶಿಕ್ಷಕರಾಗುವುದು ಅವರ ಕಡೆಯ ಆದ್ಯತೆಯಾಗಿರುತ್ತದೆ. ಅವರು ಇನ್ನಿತರ ವೃತ್ತಿಗಳಲ್ಲಿ ವಿಫಲರಾಗಿ ಅಥವಾ ಅಸಮರ್ಥರಾಗಿ ಜೀವನ ನಿರ್ವಹಣೆಗಾಗಿ ಶಾಲೆಗಳನ್ನು ತೆರೆದಿರುತ್ತಾರೆ. ಸ್ಥಳೀಯ ಶಾಲೆಗಳ ಶಿಕ್ಷಕರನ್ನು ತರಬೇತಿಗೊಳಿಸಲು ದೇಶದಲ್ಲಿ ಯಾವ ಏರ್ಪಾಡುಗಳೂ ಅಸ್ತಿತ್ವದಲ್ಲಿಲ್ಲ. ಪ್ರಸ್ತುತದಲ್ಲಿರುವ ಶಿಕ್ಷಕರನ್ನು ತರಬೇತಿ ಕಾಲೇಜುಗಳಲ್ಲಿ ತಯಾರಾದ ಮತ್ತು ದೇಶೀಯ ಭಾಷೆಗಳಲ್ಲಿ 6ನೇ ತರಗತಿಯಲ್ಲಿ ತೇರ್ಗಡೆ ಹೊಂದಿದ ವ್ಯಕ್ತಿಗಳಿಂದ ಬದಲಾಯಿಸುವವರೆಗೂ ನಮಗೆ ಈ ಸ್ಥಳೀಯ ಶಾಲೆಗಳನ್ನು ಒಳ್ಳೆಯ ಶಾಲೆಗಳನ್ನಾಗಿ ಮಾಡಲಾಗುವುದಿಲ್ಲ. ಈಗಿರುವ ಶಿಕ್ಷಕರು ಸ್ವಯಿಚ್ಛೆಯಿಂದ ರಾಜ್ಯದ ಸಹಾಯವನ್ನು ಅಂಗೀಕರಿಸುತ್ತಾರೆ. ಆದರೆ ಈ ಹಣ ಸಂಪೂರ್ಣವಾಗಿ ವ್ಯರ್ಥವಾಗುತ್ತದೆ. ಅಂತಹ ಶಾಲೆಯೊಂದಕ್ಕೆ ಸಹಾಯಕ್ಕಾಗಿ ದತ್ತಿ ನೀಡಿದ ನಿದರ್ಶನವೊಂದು ನನಗೆ ತಿಳಿದಿಲ್ಲ. ಆ ರೀತಿಯೇನಾದರೂ ಎಲ್ಲಾದರೂ

ನೀಡಿದ್ದ ಪಕ್ಷದಲ್ಲಿ ಅದೊಂದು ಅತಿ ವಿರಳವಾದ ಸಂಗತಿ. ನನ್ನ ಅಭಿಪ್ರಾಯದಲ್ಲಿ ಹೇಳುವುದಾದರೆ ಅಂತಹ ಶಾಲೆಗಳ ಮಾಸ್ತರರು ಪ್ರಮಾಣ ಪತ್ರವನ್ನು ಹೊಂದದೆ ಇದ್ದಾಗ ಯಾವುದೇ ರೀತಿಯ ಸಹಾಯ-ದತ್ತಿಗಳನ್ನು ನೀಡಬಾರದು. ಸಮರ್ಥರಾದ ಅಥವಾ ಪ್ರಮಾಣಪತ್ರ ಹೊಂದಿರುವ ಶಿಕ್ಷಕರು ಕಂಡುಬಂದರೆ ಅಲ್ಲಿ ದತ್ತಿ-ಸಹಾಯವನ್ನು ನೀಡಬೇಕು. ಅದರಿಂದ ಬಹುಜನರಿಗೆ ಒಳ್ಳೆಯದಾಗುತ್ತದೆ.

## ಉನ್ನತ ಶಿಕ್ಷಣ

ಇಡೀ ರಾಷ್ಟ್ರದಲ್ಲಿ ಕೆಲವು ದಿನಗಳ ಹಿಂದಿನಿಂದ ಸರ್ಕಾರವು ಉನ್ನತ ಶಿಕ್ಷಣಕ್ಕೆ ಸಾಕಷ್ಟು ಹಣ ಒದಗಿಸುತ್ತಿದೆ. ಆದರೆಜನ ಸಮೂಹವನ್ನುಅಲಕ್ಷ್ಯ ಮಾಡುತ್ತಿದೆಯೆಂಬ ಕೂಗು ಕೇಳಿ ಬರುತ್ತಿದೆ. ಒಂದು ಮಟ್ಟಕ್ಕೆ ಇದು ನ್ಯಾಯಸಮ್ಮತವಾದ ಸಂಗತಿ. ಉನ್ನತ ಶಿಕ್ಷಣದಿಂದ ನೇರವಾಗಿ ಲಾಭಗಳಿಸುವ ವರ್ಗಗಳು ವಾಸ್ತವಿಕವಾಗಿ ಇದನ್ನು ತತ್‌ಕ್ಷಣವೇ ಒಪ್ಪಿಕೊಳ್ಳದಿರಬಹುದು. ಆದರೆ ಇದೇನೇ ಇದ್ದರೂ ರಾಷ್ಟ್ರಕ್ಕೆ ಒಳಿತು ಬಯಸುವ ಯಾವೊಬ್ಬ ವ್ಯಕ್ತಿಯೂ ಸಹ ಸರ್ಕಾರವು ಈ ಸಂದರ್ಭದಲ್ಲಿ ಉನ್ನತ ಶಿಕ್ಷಣಕ್ಕೆ ನೀಡಿರುವ ಹಣವನ್ನು ಹಿಂತೆಗೆದುಕೊಳ್ಳಲಿ ಎಂದು ಹೇಳುವುದಿಲ್ಲ. ಒಂದು ವರ್ಗವನ್ನು ಇಲ್ಲಿ ನಿರ್ಲಕ್ಷಿಸಲಾಗಿದೆ. ಅದರ ಮುನ್ನಡೆಗಾಗಿ ಎಲ್ಲರೂ ಕಾಳಜಿ ವ್ಯಕ್ತಪಡಿಸಬೇಕೆಂದು ಅಂತಹವರು ಕಳವಳದಿಂದ ಹೇಳಬಹುದು. ಭಾರತದಲ್ಲಿ ಶಿಕ್ಷಣವು ಇನ್ನೂ ಬಾಲ್ಯಾವಸ್ಥೆಯಲ್ಲಿದೆ. ರಾಜ್ಯವು ಉನ್ನತ ಶಿಕ್ಷಣದಿಂದ ಸಹಾಯವನ್ನು ಹಿಂದೆಗೆದುಕೊಂಡರೆ ಸಾಧಾರಣವಾಗಿ ಅದು ಶಿಕ್ಷಣದ ವಿಸ್ತರಣೆಗೆ ಮಾರಕವಾಗುತ್ತದೆ.

ಲೇಖನಿಯ ಮೇಲೆ ವಿಶಿಷ್ಟವಾಗಿ ಅವಲಂಬಿತವಾಗಿರುವ ಬ್ರಾಹ್ಮಣ ಮತ್ತು ಪುರ್‌ಭೂಗಳು ಮುಂತಾದ ಶ್ರೀಮಂತ ವರ್ಗಗಳಲ್ಲಿ ಶಿಕ್ಷಣದ ಬಗ್ಗೆ ಅಭಿರುಚಿಯನ್ನು ಸೃಷ್ಟಿಸಲಾಗಿದೆ. ಈ ವರ್ಗಗಳಿಗೆ ರಾಜ್ಯದ ಸಹಾಯವನ್ನು ಕ್ರಮೇಣವಾಗಿ ಹಿಂದೆಗೆದುಕೊಳ್ಳುವುದು ಸಾಧ್ಯವಾಗಬಹುದು. ಆದರೆ ಮಧ್ಯಮ ಹಾಗೂ ಕೆಳವರ್ಗಗಳಲ್ಲಿ ಉನ್ನತ ಶಿಕ್ಷಣ ಯಾವುದೇ ಗಮನಾರ್ಹ ಪ್ರಗತಿಯನ್ನು ಸಾಧಿಸಿಲ್ಲ. ಇದರಿಂದಾಗಿ ಅಂತಹ ಸಹಾಯ ಹಿಂದೆಗೆದುಕೊಳ್ಳುವಿಕೆ ತೊಂದರೆಗಳಿಗೆಡೆ ಮಾಡಿ ಕೊಡುತ್ತದೆ. ಅಂತಹ ಸಹಾಯವನ್ನು ಹಿಂತೆಗೆದುಕೊಂಡ ಸಂದರ್ಭದಲ್ಲಿ ವಿದ್ಯಾರ್ಥಿಗಳು ಬೇರೆ ನಿರ್ವಾಹವಿಲ್ಲದೆ ಅವರ ಇಚ್ಚೆಗೆ ವಿರುದ್ಧವಾಗಿ ಅಸಮರ್ಥ ಮತೀಯ ಶಾಲೆಗಳಿಗೆ ಸೇರಬೇಕಾಗುತ್ತದೆ. ಇದರಿಂದ ಶಿಕ್ಷಣದ ಉದ್ದೇಶವೇ ವಿಫಲವಾಗುತ್ತದೆ. ಅಂತಹ ಶಿಕ್ಷಣದ ಯಾವುದೇ ಭಾಗವನ್ನು ಖಾಸಗಿಯವರಿಗೆ ಒಪ್ಪಿಸಲಾಗುವುದಿಲ್ಲ. ಇಡೀ ಶಿಕ್ಷಣ ಯಂತ್ರವು ಸರ್ಕಾರದ ಕೈಯ್ಯಲ್ಲಿರಬೇಕು. ಅದು ಸಚಿವ ಸಂಪುಟ ಮತ್ತು ಆಡಳಿತ ಯಂತ್ರ ಇವೆರಡನ್ನು ಒಳಗೊಂಡಿರಬೇಕು. ಉನ್ನತ ಹಾಗೂ ಪ್ರಾಥಮಿಕ ಶಿಕ್ಷಣಗಳೆರಡಕ್ಕೂ ಸರ್ಕಾರ ಗಮನಹರಿಸಿ ಅದನ್ನು ಪೋಷಿಸಬೇಕು.

ಶಾಲಾ ಕಾಲೇಜುಗಳಿಗೆ ಸರ್ಕಾರದ ಸಹಾಯದ ಹಿಂತೆಗೆದುಕೊಳ್ಳುವಿಕೆ ಶಿಕ್ಷಣದ ಹರಡುವಿಕೆಯನ್ನುತಡೆಗಟ್ಟುತ್ತದೆ. ಭಾರತದಲ್ಲಿರುವ ವಿವಿಧ ರಾಷ್ಟ್ರೀಯತೆಗಳು ಮತ್ತು ಧಾರ್ಮಿಕ ಪಂಥಗಳನ್ನು ಸರ್ಕಾರವು ಪೋಷಿಸುವ ಗುರಿಯನ್ನು ಹೊಂದಿರುವುದರಿಂದ ಸರ್ಕಾರದ ತಟಸ್ಥ ನೀತಿಗೆ ಅದು ಮಾರಕವಾಗುತ್ತದೆ. ಈ ಹಿಂತೆಗೆದುಕೊಳ್ಳುವಿಕೆಯು ಒಂದುಮಟ್ಟಕ್ಕೆ ಉನ್ನತ ಹಾಗೂ ಸಿರಿವಂತ ವರ್ಗಗಳಲ್ಲಿ ಸ್ಥಳೀಯ ಉದ್ದೇಶಗಳಿಗಾಗಿ ಸ್ವಾವಲಂಬನೆಯ ಸ್ಫೂರ್ತಿಯನ್ನು ಸೃಷ್ಟಿಸುತ್ತದೆ. ಆದರೆ ಶಿಕ್ಷಣದ ಉದ್ದೇಶಕ್ಕೆ ಇದು ಮಾರಕವಾಗುವುದರಿಂದ ಈ ಸ್ವಾವಲಂಬನೆಯ ಸ್ಫೂರ್ತಿ ಆ ಕೆಟ್ಟ ಪರಿಣಾಮವನ್ನು ನಿವಾರಿಸಲು ವರ್ಷಗಳೇ ಕಳೆದಿರುತ್ತವೆ. ಸಾಮರ್ಥ್ಯವಿರುವ ಶಿಕ್ಷಿತ ಜನರು ಸಾರ್ವಜನಿಕ ಸೇವೆಯ ಅವಕಾಶವನ್ನು ಗಳಿಸುವಲ್ಲಿ ಯಶಸ್ವಿಯಾಗದಿದ್ದಲ್ಲಿ ಅಂತಹವರನ್ನು ಉನ್ನತ ಶಿಕ್ಷಣದ ಶಾಲೆಗಳನ್ನು ತೆರೆಯಲು ಪ್ರೇರೇಪಿಸಬಹುದು. ಅವರಿಗೆ ಉದಾರವಾದದತ್ತಿ ನೀಡುವ ಭರವಸೆಯನ್ನು ಕೊಡಬಹುದು. ಆದರೆಯಾರೂ ಸ್ವಂತ ಖರ್ಚಿನಿಂದ ಜೀವನ ನಿರ್ವಹಣೆಯ ಸಾಧನವಾ ಇದನ್ನು ಮಾಡಲು ಸಿದ್ಧರಿರುವುದಿಲ್ಲ. ಅಂತಹ ಖಾಸಗೀ ಪ್ರಯತ್ನಗಳು ಶಾಶ್ವತವಾದ ಅಥವಾ ಸ್ಥಿರವಾದ ಪರಿಹಾರವನ್ನು ತರುವುದು ಅನುಮಾನಾಸ್ಪದವಾದ ಸಂಗತಿ. ಅದು ಯಶಸ್ಸಿನ ಅರ್ಧದಷ್ಟು ಫಲಿತಾಂಶವನ್ನೂತರುವುದಿಲ್ಲ. ಶ್ರೀಮಾನ್ ವಿಷ್ಣು ಶಾಸ್ತ್ರಿ ಚಿಪ್ಲೂನ್‌ಕರ್ ಮತ್ತು ಶ್ರೀಮಾನ್ ಭಾವೆಯವರ ಖಾಸಗೀ ಶಾಲೆಗಳು ಪೂನಾದಲ್ಲಿ ಅಸ್ತಿತ್ವದಲ್ಲಿವೆ. ಅವುಗಳಿಗೆ ಸಾಕಷ್ಟು ದತ್ತಿ ನೀಡುವುದರಿಂದ ಅವು ಪರಿಣಾಮಕಾರಿಯಾಗುವಂತೆ ಮಾಡಬಹುದು. ಆದರೆ ಆ ಶಾಲೆಗಳೆಂದಿಗೂ ಪ್ರೌಢಶಾಲೆಯ ಆವಶ್ಯಕತೆಯನ್ನು ನೀಗಿಸುವುದಿಲ್ಲ.

ಮಿಷನರಿ ಶಾಲೆಗಳಲ್ಲಿ ಕೆಲವು ಅತ್ಯಂತ ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದರೂ ಸಹ ಅವುಗಳ ಫಲಿತಾಂಶದಲ್ಲಿ ಅರ್ಧದಷ್ಟೂ ಯಶಸ್ಸು ಕಂಡುಬಂದಿಲ್ಲ. ಪ್ರೌಢಶಾಲೆಗಳು ಆಕರ್ಷಿಸುವ ಅರ್ಧದಷ್ಟು ವಿದ್ಯಾರ್ಥಿಗಳನ್ನು ಆಕರ್ಷಿಸುವುದೂ ಈ ಶಾಲೆಗಳಿಗೆ ಸಾಧ್ಯವಾಗಿಲ್ಲ. ಸರ್ಕಾರಿ ಶಾಲೆಗಳಲ್ಲಿ ಶಿಕ್ಷಕ ಸಿಬ್ಬಂದಿಗೆ ಮತ್ತು ಪ್ರಾಧ್ಯಾಪಕರುಗಳಿಗೆ ಹೆಚ್ಚಿನ ವೇತನ ನೀಡುವುದುಪ್ರಮುಖವಾಗಿ ಆ ಶಾಲೆಗಳ ವಿಶೇಷತೆಗೆ ಕಾರಣವಾಗಿದೆ. ಆದರೆ ಖಾಸಗೀ ಶಾಲೆಗಳನ್ನು ಈ ರೀತಿಯಾಗಿ ನಿರ್ವಹಿಸುವುದು ಸಾಧ್ಯವಿಲ್ಲ.

ಸರ್ಕಾರಿ ಪ್ರೌಢಶಿಕ್ಷಣ ಶಾಲೆಗಳಲ್ಲಿನ ಶಿಕ್ಷಣವು ಸಾಧಾರಣ ಜೀವನದ ಅಗತ್ಯವನ್ನು ಪೂರೈಸುವ ಗುಣವನ್ನು ಹೊಂದಿರದೆ ಕಾರ್ಯ ಸಾಧುವಾಗಿಲ್ಲ. ಅದು ಶಾಲಾ ಮಾಸ್ತರುಗಳನ್ನು ಮತ್ತು ಅನೇಕ ಗುಮಾಸ್ತರನ್ನು ತಯಾರು ಮಾಡುವ ಪ್ರಕ್ರಿಯೆಯನ್ನು ಅನುಸರಿಸುತ್ತದೆ. ಮೆಟ್ರಿಕ್ಯುಲೇಷನ್ ಪರೀಕ್ಷೆ ಅನಾವಶ್ಯಕವಾಗಿ ವಿದ್ಯಾರ್ಥಿಗಳ ಮತ್ತು ಶಿಕ್ಷಕರ ಗಮನವನ್ನು ತನ್ನೆಡೆಗೆ ಸೆಳೆಯುತ್ತದೆ. ಆದರೆಅದಕ್ಕೆ ಸಂಬಂಧಿಸಿದ ಅಧ್ಯಯನದ ವಿಷಯಗಳು ಯಾವುದೇ ಪ್ರಾಯೋಗಿಕ ಅಂಶಗಳನ್ನು ಹೊಂದಿರುವುದಿಲ್ಲ. ವಿದ್ಯಾರ್ಥಿಯ

ಸ್ವತಂತ್ರ ಬದುಕಿಗೆ ಮತ್ತು ಅವನ ಭವಿಷ್ಯಕ್ಕೆ ಅದರಿಂದ ಉಪಯೋಗವಿಲ್ಲದಂತಾಗಿದೆ. ದೇಶದಲ್ಲಿ ಜ್ಞಾನದ ಹರಡುವಿಕೆಯನ್ನು ಪರಿಗಣಿಸಿದರೆ ಅದಕ್ಕೆ ಸಮನಾಗಿ ಪ್ರವೇಶ ಪರೀಕ್ಷೆಗಳಿಗೆ ಬರುವ ವಿದ್ಯಾರ್ಥಿಗಳ ಸಂಖ್ಯೆ ಅಷ್ಟೇನೂ ಹೆಚ್ಚಾಗಿಲ್ಲ. ಆದರೆ ಸರ್ಕಾರಿ ಸೇವೆಗಳ ಅಗತ್ಯಗಳೊಂದಿಗೆ ಹೋಲಿಸಿ ನೋಡಿದಾಗ ಅದು ದೊಡ್ಡದಾಗಿ ಕಾಣಿಸುತ್ತದೆ. ಶಿಕ್ಷಣವು ಸಾರ್ವತ್ರಿಕವಾಗಿ ಎಲ್ಲರಿಗೂ ಸುಲಭವಾಗಿ ಸಿಗುವಂತಾದರೆ ಈ ಸಂಖ್ಯೆ ಇನ್ನಷ್ಟು ಹೆಚ್ಚುತ್ತದೆ. ಅದು ಹಾಗಾಗುವುದು ನನ್ನ ಹಂಬಲ. ಮುಂದೆ ಹೀಗಾಗುತ್ತದೆಂದು ನಾನು ಆಶಿಸುತ್ತೇನೆ. ಉನ್ನತ ಶಿಕ್ಷಣವು ಎಲ್ಲರಿಗೂ ಸುಲಭವಾಗಿ ಸಿಗುವಂತೆ ವ್ಯವಸ್ಥೆಗೊಳಿಸಬೇಕು ಮತ್ತು ಮೆಟ್ರಿಕ್ಯುಲೇಶನ್ ಪರೀಕ್ಷೆಯ ಪುಸ್ತಕಗಳನ್ನು ಸರ್ಕಾರಿಗೆಜೆಟ್‌ನಲ್ಲಿ ಪ್ರಕಟಿಸಬೇಕು. ಮದ್ರಾಸ್ ಮತ್ತು ಬಂಗಾಳಗಳಲ್ಲಿ ಇದನ್ನು ಅನುಸರಿಸಲಾಗುತ್ತಿದೆ. ಅಂತಹ ಕ್ರಮವು ಖಾಸಗಿ ಅಧ್ಯಯನವನ್ನು ಉತ್ತೇಜಿಸುತ್ತದೆ ಮತ್ತು ದೇಶದಲ್ಲಿ ವ್ಯಾಪಕವಾಗಿ ಜ್ಞಾನವನ್ನು ಹರಡಲು ಸಹಾಯಕವಾಗುತ್ತದೆ. ಪ್ರವೇಶ ಪರೀಕ್ಷೆಗಳಲ್ಲಿ ಬರುವ ವಿದ್ಯಾರ್ಥಿಗಳಿಗೆ ಸಂಬಂಧಿಸಿದಂತೆ ಬಾಂಬೆ ವಿಶ್ವವಿದ್ಯಾಲಯ ಅಂತಹ ಖಾಸಗೀ ಅಧ್ಯಯನಗಳಿಗೆ ಮನ್ನಣೆ ನೀಡುತ್ತಿರುವುದು ಒಂದು ವರವಾಗಿ ಬಂದಿದೆ. ವಿಶ್ವವಿದ್ಯಾಲಯದ ಅಧಿಕಾರಿಗಳು ಈ ವರವನ್ನು ಇತರ ಉನ್ನತ ಪರೀಕ್ಷೆಗಳಿಗೂ ವಿಸ್ತರಿಸುತ್ತಾರೆಂಬ ಆಶಯವನ್ನು ನಾನು ಹೊಂದಿದ್ದೇನೆ. ಖಾಸಗೀ ಅಧ್ಯಯನಗಳನ್ನು ವಿಶ್ವವಿದ್ಯಾಲಯಗಳು ಮನ್ನಿಸಿ ಬಿ.ಎ., ಎಂ.ಎ., ಮುಂತಾದ ಪದವಿಗಳನ್ನು ನೀಡಿದರೆ ಅನೇಕ ಯುವಜನರುತಮ್ಮ ವೇಳೆಯನ್ನು ಖಾಸಗೀ ಅಧ್ಯಯನಗಳಲ್ಲಿ ಉಪಯೋಗಿಸಬಹುದು. ಅವರು ಈ ರೀತಿ ಮಾಡಿದ ಪರಿಣಾಮವಾಗಿಜ್ಞಾನವು ಮತ್ತಷ್ಟು ವ್ಯಾಪಕವಾಗಿ ಹರಡುತ್ತದೆ. ಹಲವಾರು ನಿದರ್ಶನಗಳಲ್ಲಿ ಹಲವಾರು ಕಾರಣಗಳಿಂದ ಕಾಲೇಜುಗಳಲ್ಲಿ ವಿದ್ಯಾಭ್ಯಾಸವನ್ನು ನಡೆಸುವುದು ಅಸಾಧ್ಯವೆಂದು ಕಂಡುಬಂದಿದೆ. ವಿಶ್ವವಿದ್ಯಾಲಯಗಳು ಖಾಸಗೀ ಅಧ್ಯಯನಗಳನ್ನು ಮನ್ನಣೆ ಮಾಡುವುದರಿಂದ ದೇಶದಲ್ಲಿ ಬಹುಜನರಿಗೆ ಒಳ್ಳೆಯದಾಗುತ್ತದೆ ಮತ್ತು ಉನ್ನತ ಶಿಕ್ಷಣಕ್ಕಾಗಿ ವ್ಯಯವಾಗುತ್ತಿರುವ ಸಾರ್ವಜನಿಕ ಹಣವನ್ನು ಕಡಿತಗೊಳಿಸಬಹುದು.

ಸರ್ಕಾರಿ ಶಾಲೆಗಳಲ್ಲಿ ಪ್ರಸ್ತುತದಲ್ಲಿಅನುಸರಿಸುತ್ತಿರುವ ಸರ್ಕಾರಿ ವ್ಯಾಸಂಗ ವೇತನ ಪದ್ಧತಿ ದೋಷಪೂರಿತವಾಗಿದೆ. ಅದು ಶಿಕ್ಷಣಕ್ಕೆ ಈಗಾಗಲೇ ಅಭಿರುಚಿಯಿರುವ ವರ್ಗಗಳಿಗೆ ಅನಾವಶ್ಯಕ ಉತ್ತೇಜನ ನೀಡುತ್ತದೆ. ಇದರಿಂದ ಇನ್ನಿತರ ಕೆಳವರ್ಗಗಳಿಗೆ ಹಾನಿಯುಂಟಾಗುತ್ತದೆ. ಯಾವ ವರ್ಗಗಳಲ್ಲಿ ಶಿಕ್ಷಣವು ಪ್ರಗತಿಕಂಡಿಲ್ಲವೊ ಅಂತಹ ವರ್ಗಗಳಿಗೆ ಈ ವ್ಯಾಸಂಗ ವೇತನದಲ್ಲಿ ಕೆಲವು ಸಿಗುವಂತೆ ಈ ಪದ್ಧತಿಯನ್ನು ಪುನರ್‌ರಚಿಸಬೇಕಾಗಿದೆ.

ವ್ಯಾಸಂಗ ವೇತನವನ್ನು ಸ್ಪರ್ಧೆಗಳ ಮೂಲಕ ನೀಡುವ ಪದ್ಧತಿ ಮೇಲ್ನೋಟಕ್ಕೆ ಅಮೂರ್ತ ಸಮಾನತೆಯನ್ನು ತೋರಿಸಿದರೂ ಸಹ ಅದರಿಂದ ಇತರ ವರ್ಗಗಳಲ್ಲಿ ಶಿಕ್ಷಣವನ್ನು ಹರಡುವ ಪ್ರವೃತ್ತಿ ಕಂಡುಬರುವುದಿಲ್ಲ.

ಶಿಕ್ಷಿತ ಸ್ಥಳೀಯ ನಿವಾಸಿಗಳು ಲಾಭದಾಯಕ ಉದ್ಯೋಗಗಳನ್ನು ಕಂಡುಕೊಳ್ಳುವ ವಿಷಯಕ್ಕೆ ಸಂಬಂಧಿಸಿದ ಪ್ರಶ್ನೆಯನ್ನು ಕುರಿತಂತೆ ಶಿಕ್ಷಿತ ಸ್ಥಳೀಯ ನಿವಾಸಿಗಳು, ಬ್ರಾಹ್ಮಣರು ಹಾಗೂ ಇನ್ನಿತರ ಉನ್ನತ ವರ್ಗಗಳಿಗೆ ಸೇರಿದವರಾಗಿದ್ದು ಅವರು ಸರ್ಕಾರೀ ಸೇವೆಗಳಿಗಾಗಿ ಹಂಬಲಿಸುತ್ತಾರೆ. ಶಾಲಾ ಕಾಲೇಜುಗಳಿಂದ ಹೊರಬರುವ ಎಲ್ಲ ಶಿಕ್ಷಿತ ಸ್ಥಳೀಯರಿಗೂ ಸಾರ್ವಜನಿಕ ಕ್ಷೇತ್ರದಲ್ಲಿ ಉದ್ಯೋಗವನ್ನೊದಗಿಸುವುದು ಸಾಧ್ಯವಿಲ್ಲ. ಮೇಲಾಗಿ ಅವರು ಗಳಿಸಿರುವ ಶಿಕ್ಷಣ ತಾಂತ್ರಿಕ ಅಂಶಗಳನ್ನೊಳಗೊಳ್ಳದೆ ಅಥವಾ ಯಾವುದೇ ಪ್ರಾಯೋಗಿಕ ಸ್ವರೂಪವನ್ನು ಹೊಂದಿಲ್ಲದೇ ಇರುವುದರಿಂದ ಅದನ್ನು ಪಡೆದಿರುವವರಿಗೆ ಬೇರೆ ದೈಹಿಕ ಅಥವಾ ಲಾಭದಾಯಕವಾದ ಇನ್ನಿತರ ಕೆಲಸಗಳನ್ನು ಮಾಡುವುದು ಕಷ್ಟವಾಗುತ್ತದೆ. ಶಿಕ್ಷಿತ ಸ್ಥಳೀಯರು ಹೆಚ್ಚಾಗಿರುವುದರಿಂದ ಯಾವುದೇ ಲಾಭದಾಯಕ ಉದ್ಯೋಗಗಳು ಕಾಣಿಸುತ್ತಿಲ್ಲವೆಂಬ ಧ್ವನಿ ಕೇಳಿಬರುತ್ತಿದೆ. ಒಂದು ಮಟ್ಟಕ್ಕೆ ಹೇಳುವುದಾದರೆ ಇದು ನಿಜವೆನಿಸುತ್ತದೆ. ಕೆಲವೊಂದು ವೃತ್ತಿಗಳಿಗೆ ಆವಶ್ಯಕತೆಗಿಂತ ಹೆಚ್ಚಾಗಿ ಜನರಿದ್ದಾರೆ. ಆದರೆ ಇದರಿಂದ ಯಾವುದೇ ರೀತಿಯ ಇನ್ನಿತರ ಲಾಭದಾಯಕವಾದ ಉದ್ಯೋಗಗಳೇ ಇಲ್ಲವೆಂದು ಹೇಳಲಾಗುವುದಿಲ್ಲ. ದೇಶದ ವೈಶಾಲ್ಯಕ್ಕೆ ಹೋಲಿಸಿದಾಗ ಈಗಿರುವ ಶಿಕ್ಷಿತರ ಸಂಖ್ಯೆ ಅತಿ ಕಡಮೆ. ಆದರೆ ಪ್ರಸ್ತುತ ಶಿಕ್ಷಿತರ ಸಂಖ್ಯೆಗೆ ನೂರು ಪಟ್ಟು ಹೆಚ್ಚು ಶಿಕ್ಷಿತ ಜನರು ಉಪಯುಕ್ತವಾದ ಮತ್ತು ಲಾಭದಾಯಕವಾದ ಉದ್ಯೋಗಗಳನ್ನು ಪಡೆಯುವ ದಿನ ದೂರವಿಲ್ಲವೆಂದು ನಾನು ನನ್ನ ವಿಶ್ವಾಸವನ್ನು ವ್ಯಕ್ತಪಡಿಸುತ್ತೇನೆ. ಅರ್ರ್ಯಾರೂ ಸರ್ಕಾರಿ ಸೇವೆಗಾಗಿ ಎದುರು ನೋಡುವುದಿಲ್ಲ.

ಅಂತಿಮವಾಗಿ ಶಿಕ್ಷಣ ಆಯೋಗವು ಹೆಣ್ಣುಮಕ್ಕಳ ಪ್ರಾಥಮಿಕ ಶಿಕ್ಷಣವನ್ನು ಹರಡಲು ಉದಾರವಾದ ಕ್ರಮಗಳನ್ನು ತೆಗೆದುಕೊಳ್ಳಬೇಕೆಂದು ನಾನು ಮನವಿ ಮಾಡುತ್ತೇನೆ.

**ಪೂನಾ** **ಜ್ಯೋತಿರಾವ್ ಗೋವಿಂದರಾವ್ ಫುಲೆ**

19ನೇ ಅಕ್ಟೋಬರ್ 1882

ವ್ಯಾಪಾರಿ ಮತ್ತುರೈತರು ಮತ್ತು

ಮುನಿಸಿಪಲ್ ಆಯುಕ್ತರು

ಪೇತ್‌ಜೂನಗಾಂಜ

***